CPMG / KA / BG-GPO/13/2003-2005

ಸುವರ್ಣ ಕರ್ನಾಟಕ - 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಜುಲೈ ೭, ೨೦೦೫ (ಆಷಾಢ ೧೬, ಶಕ ವರ್ಷ ೧೯೨೭) | ಸಂಚಿಕೆ ೨೭ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿಗಳು

**ವಿಷಯ :** ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಕೂನೂರು ಗ್ರಾಮದಲ್ಲಿ ಮಲ್ಟಿಕಲರ್ ಗ್ರಾನೈಟ್ ಶಿಲೆಗಾಗಿ ಮೆ: ಕರ್ನಾಟಕ ರೇರ್ ಅರ್ಥ ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 527ರ ಗುತ್ತಿಗೆಯನ್ನು ಲ್ಯಾಪ್ಸ್ಡ್ ಲೀಸ್ ಎಂದು ಪರಿಗಣಿಸುವ ಬಗ್ಗೆ.

**ಉಲ್ಲೇಖ :**
1. ಕೇಂದ್ರ ಕಛೇರಿ ಪತ್ರ ಸಂಖ್ಯೆ: ಗಭೂಇ:ಡಿಸಿಬಿ: ಕಗಗು:527:2004-05:4527 ದಿನಾಂಕ: 18.11.2004.
2. ಉಪ ನಿರ್ದೇಶಕರು, ಕನಕಪುರ ರವರ ಪತ್ರ ಸಂಖ್ಯೆ: ಗಭೂಇ: ಉನಿಕ:ಡಿಸಿಬಿ:ಕಗಗು:527:2005-06:578 ದಿನಾಂಕ: 16.04.2005.

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಕೂನೂರು ಗ್ರಾಮದ ಸರ್ವೆ ನಂ.140 ರಲ್ಲಿ ಮೆ: ಕರ್ನಾಟಕ ರೇರ್ ಅರ್ಥ ರವರಿಗೆ 3.20 ಎಕರೆಗೆ ದಿನಾಂಕ: 4.07.2002 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಉಲ್ಲೇಖಿಸಿರುವ ಪತ್ರಗಳಡಿಯಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ 2004ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ.1,10,522/- ಗಳನ್ನು ಪಾವತಿಸುವಂತೆ ತಿಳಿಸಲಾಗಿತ್ತು.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ಪತ್ರ 1ರ ಅಂತಿಮ ನೋಟೀಸಿಗೆ ಯಾವ ರೀತಿಯೂ ಸ್ಪಂದಿಸಿರುವುದಿಲ್ಲವಾದ ಕಾರಣ ಹಾಗೂ ಉಲ್ಲೇಖಿತ ಪತ್ರದ 2 ರಲ್ಲಿ ತಿಳಿಸಿದಂತೆ ಗುತ್ತಿಗೆಯನ್ನು ನಿಷ್ಕ್ರಿಯವಾಗಿಟ್ಟಿರುವುದರಿಂದ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6 (1)ರಂತೆ ಸರ್ಕಾರದ ಅಧಿಸೂಚನೆ III ಸಂಖ್ಯೆ: ಸಿಐ 418 ಎಂಆರ್‌ಸಿ 92 ದಿನಾಂಕ: 2.07.94 ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದಂತೆ ಗುತ್ತಿಗೆಯನ್ನು ಲ್ಯಾಪ್ಸ್ಡ್ ಲೀಸ್ ಎಂದು ಪರಿಗಣಿಸ ಬೇಕಾಗಿರುವುದರಿಂದ ಕೆಳಗಿನಂತೆ ಆದೇಶ ಮಾಡಲಾಗಿದೆ.

**ಆದೇಶ**

**ಆದೇಶ ಸಂಖ್ಯೆ: ಗಭೂಇ:ಡಿಸಿಬಿ:ಕಗಗು:527:2005-06/3363: ದಿನಾಂಕ: 15ನೇ ಜೂನ್ 2005**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6 (1)ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕಿನ, ಕೂನೂರು ಗ್ರಾಮದ ಸರ್ವೆ ನಂ.140 ರಲ್ಲಿ 3-20 ಎಕರೆಗೆ ಮಲ್ಟಿಕಲರ್ ಗ್ರಾನೈಟ್ ಶಿಲೆಗಾಗಿ ಮೆ: ಕರ್ನಾಟಕ ರೇರ್ ಅರ್ಥ ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆಯನ್ನು ನಿಷ್ಕ್ರಿಯಗೊಳಿಸಿರುವ ಕಾರಣ ತಕ್ಷಣದಿಂದ ಲ್ಯಾಪ್ಸ್ಡ್ ಲೀಸ್ ಎಂದು ಪರಿಗಣಿಸಲಾಗಿದೆ.

ನಿರ್ದೇಶಕರು,
ಗಣಿ ಮತ್ತು ಭೂವಿಜ್ಞಾನ ಇಲಾಖೆ,

ಪಿ.ಆರ್.876

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

## ಅಧಿಸೂಚನೆ

### ಸಂಖ್ಯೆ: ಅಪಜೀ 88 ಎಫ್‌ಪಿಸಿ 2005 ಬೆಂಗಳೂರು, ದಿನಾಂಕ: 13ನೇ ಜೂನ್ 2005

ಡಾ: ಎಸ್. ಎನ್. ರಾಯ್ ಭಾಅಸೇ., ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು ಮತ್ತು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ, ಇವರ ಬದಲಿಗೆ ಶ್ರೀ ಆರ್. ಎಂ. ರೇ, ಭಾಅಸೇ., ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು, ಇವರನ್ನು ಕರ್ನಾಟಕ ಗೇರು ಅಭಿವೃದ್ಧಿ ನಿಗಮ ಮಂಗಳೂರು, ಇದರ ನಿರ್ದೇಶಕರ ಮಂಡಳಿಯ ನಿರ್ದೇಶಕರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.877

**ಹೆಚ್. ಎಂ. ಮಲ್ಲಿಕಾರ್ಜುನಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ

## ಅಧಿಸೂಚನೆ

### ಸಂಖ್ಯೆ: ಮಾತಂಇ 26 ಇಸಂಸೇ 2003 ಬೆಂಗಳೂರು, ದಿನಾಂಕ: 15ನೇ ಜೂನ್ 2005

ಕರ್ನಾಟಕ ರಾಜ್ಯ ನಾಗರೀಕ ಸೇವಾ (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಿಗೆ ಸೇರಿದ ಅಭ್ಯರ್ಥಿಗಳಿಗೆ ಮೀಸಲಾದ ಖಾಲಿ ಹುದ್ದೆಗಳು) (ವಿಶೇಷ ನೇಮಕಾತಿ) ನಿಯಮಗಳು 2001ರ ಅನ್ವಯ ಸರ್ಕಾರದ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯದಲ್ಲಿ ಜೂನಿಯರ್ ಪ್ರೋಗ್ರಾಮರ್‌ಗಳ ಬ್ಯಾಕ್‌ಲಾಗ್ ಹುದ್ದೆಗಳನ್ನು ಭರ್ತಿಮಾಡುವ ಬಗ್ಗೆ ಕರ್ನಾಟಕ ಲೋಕಸೇವಾ ಆಯೋಗವು ಆಯ್ಕೆ ಮಾಡಿ ಕಳುಹಿಸಿರುವ ಹೆಚ್ಚುವರಿ ಪಟ್ಟಿಯಲ್ಲಿ ಈ ಕೆಳಕಂಡ ಅಭ್ಯರ್ಥಿಯನ್ನು ಸದರಿ ನಿರ್ದೇಶನಾಲಯದಲ್ಲಿ ರೂ. 6000-11200 ಶ್ರೇಣಿಯಲ್ಲಿ ಜೂನಿಯರ್ ಪ್ರೋಗ್ರಾಮರ್ ಆಗಿ ಎರಡು ವರ್ಷಗಳ ಪರೀಕ್ಷಾರ್ಥಿಯಾಗಿ, ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗೊಳಪಟ್ಟು ನೇಮಕ ಮಾಡಲಾಗಿದೆ.

ಶ್ರೀ ಸಂಜೀವ್ ಕೊಟೆಗೆಯವಾಡಿ ವಾಸಿ ಅಂಬೆಸನಗಾವಿ ಅಂಚೆ ಭಾಲ್ಕಿ ತಾಲ್ಲೂಕು ಬೀದರ್ ಜಿಲ್ಲೆ-585328

**ಷರತ್ತು ಮತ್ತು ನಿಬಂಧನೆಗಳು:**

1. ಮೇಲ್ಕಂಡ ಅಭ್ಯರ್ಥಿಯ ನೇಮಕಾತಿ ಮಹಿಳಾ ಮೀಸಲಾತಿ ಕುರಿತಂತೆ ಭಾರತದ ಸರ್ವೋಚ್ಚ ನ್ಯಾಯಾಲಯದಲ್ಲಿನ ರಿಟ್ ಅರ್ಜಿ ಸಿವಿಲ್ ಸಂಖ್ಯೆ: 232/99ರ ಅಂತಿಮ ತೀರ್ಮಾನಕ್ಕೆ ಬದ್ದವಾಗಿರುತ್ತದೆ.
2. ಮೇಲ್ಕಂಡ ಅಭ್ಯರ್ಥಿಯ ನೇಮಕಾತಿಯು ತಾತ್ಕಾಲಿಕವಾಗಿದ್ದು, ಆತನ ನೇಮಕಾತಿ, ಸೇವಾ ಜೇಷ್ಠತಾ ಮತ್ತು ಸೇವಾ ಷರತ್ತುಗಳು ಆಗಿಂದಾಗ್ಗೆ ಜಾರಿಯಲ್ಲಿರುವ ನಿಯಮಾವಳಿಗಳ ಅಥವಾ ಆದೇಶಗಳ ಅಧೀನಕ್ಕೆ ಒಳಪಟ್ಟಿರುತ್ತದೆ.
3. ಸದರಿ ಅಭ್ಯರ್ಥಿಯು 1977ರ ಕರ್ನಾಟಕ ನಾಗರೀಕ ಸೇವೆಗಳು (ಪರೀಕ್ಷಾರ್ಥ) ನಿಯಮಾವಳಿಗಳಿಗೆ ಬದ್ಧರಾಗಿರುತ್ತಾರೆ.
4. ಪರೀಕ್ಷಾರ್ಥ ಅವಧಿಯಲ್ಲಿ ಅಭ್ಯರ್ಥಿಯು 1974ರ ಕರ್ನಾಟಕ ನಾಗರೀಕ ಸೇವೆಗಳು (ಸೇವಾ ಮತ್ತು ಕನ್ನಡ ಭಾಷಾ ಪರೀಕ್ಷೆ) ನಿಯಮಾವಳಿಗಳಲ್ಲಿ, ಮೇಲ್ಕಂಡ ಹುದ್ದೆಗೆ ನಿಗದಿಪಡಿಸಿರುವ ಪರೀಕ್ಷೆಗಳಲ್ಲಿ ಮತ್ತು ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗತಕ್ಕದ್ದು ಅಥವಾ ವಿನಾಯ್ತಿ ಪಡೆಯತಕ್ಕದ್ದು.
5. ಅಭ್ಯರ್ಥಿಯು ಕರ್ತವ್ಯಕ್ಕೆ ಹಾಜರಾಗುವ ಸಮಯದಲ್ಲಿ ಆತನ ಜನ್ಮ ದಿನಾಂಕ, ವಿದ್ಯಾರ್ಹತೆ, ಮೀಸಲಾತಿ ಪ್ರಮಾಣ ಪತ್ರ ಮತ್ತು ಇತರೆ ಮೂಲ ದಾಖಲೆಗಳನ್ನು ಪರಿಶೋಧನೆಗಾಗಿ ಹಾಜರುಪಡಿಸತಕ್ಕದ್ದು.
6. ಕರ್ನಾಟಕ ನಾಗರೀಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಾವಳಿಗಳು 1977ರ ನಿಯಮ 18ರ ರೀತ್ಯಾ ನೇಮಕಾತಿ ಆದೇಶ ಹೊರಡಿಸಿದ 15 ದಿನಗಳ ಒಳಗಾಗಿ ಅಭ್ಯರ್ಥಿಯು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ, 4ನೇ ಮಹಡಿ, ಯು.ಎನ್.ಐ. ಕಟ್ಟಡ, ಮಿಲ್ಲರ್ ಟ್ಯಾಂಕ್ ಬೆಡ್, ತಿಮ್ಮಯ್ಯ ರಸ್ತೆ, ಬೆಂಗಳೂರು-560 052, ಇವರ ಕಛೇರಿಯಲ್ಲಿ ಕರ್ತವ್ಯಕ್ಕೆ ಹಾಜರಾಗತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.878

**ಬಿ. ವಿ. ಕುಮಾರಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಮಾಹಿತಿ ತಂತ್ರಜ್ಞಾನ ಜೈವಿಕ ತಂತ್ರಜ್ಞಾನ,
ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

## ಸಾರಿಗೆ ಇಲಾಖೆ

## ಅಧಿಸೂಚನೆ

### ಸಂಖ್ಯೆ: ಸಾರಿಇ 247 ಸಾಇಪ 2004 ಬೆಂಗಳೂರು, ದಿನಾಂಕ: 6ನೇ ಜೂನ್ 2005

ಮೈಸೂರು ರಾಜ್ಯ ಸಾರಿಗೆ ಸಂಸ್ಥೆ (ಈಗ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ) ಮೋಟಾರು ವಾಹನ ಕಾಯ್ದೆ 1939ರ ವಿಧಿ 68(ಸಿ)ನಲ್ಲಿ ಅನೇಕ ಅಧಿಸೂಚನೆಗಳನ್ನು ಮೈಸೂರು ರಾಜ್ಯ ಪತ್ರದಲ್ಲಿ ಪ್ರಕಟಿಸಿ, ಅವುಗಳನ್ನು ರಾಜ್ಯ ಸರ್ಕಾರವು ಮೇಲ್ಕಂಡ ಪ್ರಕರಣ ಕಾಯ್ದೆಯ 68(ಡಿ) (2) ಅಡಿಯಲ್ಲಿ ಅಂಗೀಕರಿಸಿ ಈ ಕೆಳಗಿನ ಅಧಿಸೂಚನೆಗಳನ್ನು ಅನುಮೋದಿಸಿ ಪ್ರಕಟಿಸಿದೆ.

1. ಸಂ. ಹೆಚ್‌ಡಿ/111/ಟಿಎಂಪಿ/59, ದಿನಾಂಕ: 11.7.1959 ಧಾರವಾಡ, ಉತ್ತರ ಕನ್ನಡ ಜಿಲ್ಲೆಗಳು ಭಾಗಶ: ಬೆಳಗಾಂ ಮತ್ತು ಬಿಜಾಪುರ ಜಿಲ್ಲೆಗಳಿಗೆ, ಸಂಬಂಧಿಸಿದ್ದು (ಹುಬ್ಬಳ್ಳಿ, ಧಾರವಾಡ ಯೋಜನೆಯೆಂದು ಗುರುತಿಸಲ್ಪಟ್ಟಿದೆ).
2. ಸಂ: ಹೆಚ್‌ಡಿ/17/ಟಿಎಂಪಿ/59, ದಿನಾಂಕ: 22.12.1959 ಹಾಸನ ಜಿಲ್ಲೆ ಹಾಗೂ ಭಾಗಶ: ನೆರೆಯ ಅಂತರ್ ಜಿಲ್ಲಾ ಮಾರ್ಗಗಳಿಗೆ ಸಂಬಂಧಿಸಿದ್ದು (ಹಾಸನ ಯೋಜನೆಯೆಂದು ಗುರುತಿಸಲ್ಪಟ್ಟಿದೆ).

3. ಸಂ: ಹೆಚ್‌ಡಿ/56/ಟಿಎಂಪಿ/59, ದಿನಾಂಕ: 19.1.1960 ಬೆಳಗಾಂ ಜಿಲ್ಲೆ ಹಾಗೂ ಭಾಗಶ: ಉತ್ತರ ಕನ್ನಡ, ಧಾರವಾಡ ಮತ್ತು ಬಿಜಾಪುರ ಜಿಲ್ಲೆಗಳಿಗೆ ಸಂಬಂಧಿಸಿದ್ದು (ಬೆಳಗಾಂ ಯೋಜನೆಯೆಂದು ಗುರುತಿಸಲ್ಪಟ್ಟಿದೆ).
4. ಸಂ: ಹೆಚ್‌ಡಿ/26/ಟಿಎಂಪಿ/59, ದಿನಾಂಕ: 18.2.1960 ಬಿಜಾಪುರ ಜಿಲ್ಲೆ ಹಾಗೂ ಭಾಗಶ: ಬೆಳಗಾಂ, ಧಾರವಾಡ ರಾಯಚೂರು ಮತ್ತು ಗುಲ್ಬರ್ಗಾ ಜಿಲ್ಲೆಗಳಿಗೆ ಸಂಬಂಧಿಸಿದ್ದು (ಬಿಜಾಪುರ ಯೋಜನೆಯೆಂದು ಗುರುತಿಸಲ್ಪಟ್ಟಿದೆ).
5. ಸಂ: ಹೆಚ್‌ಡಿ/57/ಟಿಎಂಪಿ/59 ದಿನಾಂಕ: 18.2.1960 ಬೀದರ್, ಗುಲ್ಬರ್ಗಾ ಮತ್ತು ರಾಯಚೂರು ಜಿಲ್ಲೆಗಳು ಹಾಗೂ ಭಾಗಶ: ಬಳ್ಳಾರಿ ಮತ್ತು ಬಿಜಾಪುರ ಜಿಲ್ಲೆಗಳಿಗೆ ಸಂಬಂಧಿಸಿದ್ದು (ಗುಲ್ಬರ್ಗಾ ಯೋಜನೆಯೆಂದು ಗುರುತಿಸಲ್ಪಟ್ಟಿದೆ).
6. ಸಂ: ಹೆಚ್‌ಡಿ/172/(2)/ಟಿಎಂಪಿ/60, ದಿನಾಂಕ: 07.06.1960 ಭಾಗಶ: ಬೆಂಗಳೂರು, ಕೋಲಾರ, ತುಮಕೂರು, ಮೈಸೂರು, ಮಂಡ್ಯ, ಚಿತ್ರದುರ್ಗ, ಹಾಸನ, ಕೊಡಗು, ದಕ್ಷಿಣ ಕನ್ನಡ, ಬಳ್ಳಾರಿ ಮತ್ತು ಚಿಕ್ಕಮಗಳೂರು ಜಿಲ್ಲೆಗಳ ಪಟ್ಟಿಮಾಡಿ ಲಗತ್ತಿಸಿದಂತಹ ಮಾರ್ಗಗಳಲ್ಲಿ ಮೈಸೂರು ರಾಜ್ಯ ರಸ್ತೆ ಸಾರಿಗೆ ಇಲಾಖೆಯು ಪ್ರವರ್ತಿಸುತ್ತಿರುವುದು (ಬೆಂಗಳೂರು ಯೋಜನೆಯೆಂದು ಗುರುತಿಸಲ್ಪಟ್ಟಿದೆ).
7. ಸಂ: ಹೆಚ್‌ಡಿ/186/ಟಿಎಂಪಿ/60 ದಿನಾಂಕ: 7.11.1960 ಹುಬ್ಬಳ್ಳಿ ನಗರ ಪಾಲಿಕೆಯ ವ್ಯಾಪ್ತಿಯಲ್ಲಿ ಎಂಟು ಮೈಲಿ ನಗರ ಮಿತಿಯ ಸರಹದ್ದಿಗೆ ಸಂಬಂಧಿಸಿದ್ದು (ಹುಬ್ಬಳ್ಳಿ ನಗರ ಯೋಜನೆಯೆಂದು ಗುರುತಿಸಲ್ಪಟ್ಟಿದೆ).
8. ಸಂ: ಹೆಚ್‌ಡಿ/200/ಟಿಎಂಪಿ/60, ದಿನಾಂಕ: 17.11.1960 ಪಟ್ಟಿಮಾಡಿ ಲಗತ್ತಿಸಿರುವ ಅನುಮೋದಿತ ಯೋಜನೆಯ ಕೆಲವು ಮಾರ್ಗಗಳಿಗೆ ಸಂಬಂಧಿಸಿದ್ದು, (ಮೈಸೂರು ಯೋಜನೆಯೆಂದು ಗುರುತಿಸಲ್ಪಟ್ಟಿದೆ).
9. ಸಂ: ಹೆಚ್‌ಡಿ/22/ಟಿಎಂಪಿ/64, ದಿನಾಂಕ: 18.4.1964 ಪಟ್ಟಿ ಮಾಡಿ ಲಗತ್ತಿಸಿರುವ ಅನುಮೋದಿತ ಯೋಜನೆಯ ಕೆಲವು ಮಾರ್ಗಗಳಿಗೆ ಸಂಬಂಧಿಸಿದಂತೆ (ಬಳ್ಳಾರಿ ಯೋಜನೆಯೆಂದು ಗುರುತಿಸಲ್ಪಟ್ಟಿದೆ).
10. ಸಂ: ಹೆಚ್‌ಡಿ/44/ಟಿಎಂಪಿ/64, ದಿನಾಂಕ: 30.04.1964 ಗುಲ್ಬರ್ಗಾದಿಂದ ಜಗತ್ ಮುಖಾಂತರ ಸೇಡಂ, ಕಾಲನೂರು ಕ್ರಾಸ್, ಸಾರಗಟ್ಟಿ ಕ್ರಾಸ್, ಮದ್ಬಲ್‌ಗ್ರಾಮ, ಮುಪ್ತ ಗುಂಡಗುತ್ತಿ, ಮಲ್ಕೆಡ್ ಮತ್ತು ನೀಲಹಳ್ಳಿ ಮತ್ತು ವಾಪಸ್ಸು ಮಾರ್ಗಕ್ಕೆ ಸಂಬಂಧಿಸಿದ್ದು (ಗುಲ್ಬರ್ಗಾ-ಸೇಡಂ ಯೋಜನೆಯೆಂದು ಗುರುತಿಸಲ್ಪಟ್ಟಿದೆ).
11. ಸಂ: ಹೆಚ್‌ಡಿ:43:ಟಿಎಂಪಿ:62, ದಿನಾಂಕ: 02.07.1964 ಯಾದಗಿರ್‌ನಿಂದ ನಾರಾಯಣ್ ಪೇಟ್, ರಾಮಸಮುದ್ರಂ, ಗುಂಜನೂರು, ಜಲಾಲ್ಪುರ್ ಮತ್ತು ವಾಪಸ್ಸು ಮಾರ್ಗಕ್ಕೆ ಸಂಬಂಧಿಸಿದ್ದು (ಯಾದ್‌ಗಿರ್-ನಾರಾಯಣ್ ಪೇಟ್ ಯೋಜನೆಯೆಂದು ಗುರುತಿಸಲ್ಪಟ್ಟಿದೆ).
12. ಸಂ: ಹೆಚ್‌ಡಿ/63(2)/ಟಿಎಂಪಿ/64, ದಿನಾಂಕ: 18.03.1967 ಪಟ್ಟಿ ಮಾಡಿ ಲಗತ್ತಿಸಿರುವ ಅನುಮೋದಿತ ಯೋಜನೆಯ ಕೆಲವು ಮಾರ್ಗಗಳಿಗೆ ಸಂಬಂಧಿಸಿದಂತೆ (ಮಂಗಳೂರು ಯೋಜನೆಯೆಂದು ಗುರುತಿಸಲ್ಪಟ್ಟಿದೆ).
13. ಸಂ: ಹೆಚ್‌ಡಿ/71(2)/ಟಿಎಂಪಿ/64, ದಿನಾಂಕ: 18.03.1967 ಪಟ್ಟಿಮಾಡಿ ಲಗತ್ತಿಸಿರುವ ಅನುಮೋದಿತ ಯೋಜನೆಯ ಕೆಲವು ಮಾರ್ಗಗಳಿಗೆ ಸಂಬಂಧಿಸಿದಂತೆ ಶಿವಮೊಗ್ಗ ಯೋಜನೆಯೆಂದು ಗುರುತಿಸಲ್ಪಟ್ಟಿದೆ).
14. ಸಂ: ಹೆಚ್‌ಡಿ/56/ಟಿಎಂಪಿ/59, ದಿನಾಂಕ: 19.1.1960 ಪಟ್ಟಿ ಮಾಡಿ ಲಗತ್ತಿಸಿರುವ ಅನುಮೋದಿತ ಯೋಜನೆಯ ಕೆಲವು ಮಾರ್ಗಗಳಿಗೆ ಸಂಬಂಧಿಸಿದಂತೆ (ಕೋಲಾರ ಯೋಜನೆಯೆಂದು ಗುರುತಿಸಲ್ಪಟ್ಟಿದೆ).
15. ಸಂ: ಹೆಚ್‌ಡಿ/161/ಟಿಎಂಐ/82, ದಿನಾಂಕ: 6.11.1985 ಪಟ್ಟಿ ಮಾಡಿ ಲಗತ್ತಿಸಿರುವ ಅನುಮೋದಿತ ಯೋಜನೆಯ ಕೆಲವು ಮಾರ್ಗಗಳಿಗೆ ಸಂಬಂಧಿಸಿದಂತೆ (ಗುಲ್ಬರ್ಗಾ-ಬೀದರ್ ಯೋಜನೆಯೆಂದು ಗುರುತಿಸಲ್ಪಟ್ಟಿದೆ).
16. ಸಂ: ಎಫ್‌ಟಿಡಿ/57/ಟಿಎಂಐ/85, ದಿನಾಂಕ: 23.09.1987 ಅನುಮೋದಿತ ಯೋಜನೆಯ ಮಾರ್ಗ ಚಿತ್ರದುರ್ಗದಿಂದ ದಾವಣಗೆರೆ, ಗುತ್ತಿನಾಡು, ಕತ್ರಾಳು, ಸಿರಿಗೆರೆ ಕ್ರಾಸ್, ಭರಮಸಾಗರ, ಹನಗೋಡು ಮತ್ತು ವಾಪಸ್ಸು ಮಾರ್ಗ (ರಾಷ್ಟ್ರೀಯ ಹೆದ್ದಾರಿ-4ರಲ್ಲಿ) (ಚಿತ್ರದುರ್ಗ ಯೋಜನೆಯೆಂದು ಗುರುತಿಸಲ್ಪಟ್ಟಿದೆ).
17. ಸಂ: ಎಫ್‌ಟಿಡಿ/140/ಟಿಎಂಐ/82, ದಿನಾಂಕ: 03.11.1987 ಪಟ್ಟಿ ಮಾಡಿ ಲಗತ್ತಿಸಿರುವ ಅನುಮೋದಿತ ಯೋಜನೆಯ ಕೆಲವು ಮಾರ್ಗಗಳಿಗೆ ಸಂಬಂಧಿಸಿದಂತೆ (ರಾಯಚೂರು ಯೋಜನೆಯೆಂದು ಗುರುತಿಸಲ್ಪಟ್ಟಿದೆ).

ಮೇಲ್ಕಂಡ ಎಲ್ಲಾ ಅನುಮೋದಿತ ಸಾರಿಗೆ ಯೋಜನೆಗಳಿಗೆ ಸಂಬಂಧಿಸಿದ ಮಾರ್ಗ ಮತ್ತು ಪ್ರದೇಶಗಳಲ್ಲಿ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯು ಮಾತ್ರ ಸೇವೆ ಸಲ್ಲಿಸಲು ಅವಕಾಶ ನೀಡಲಾಗಿರುತ್ತದೆ.

ಕರ್ನಾಟಕ ರಾಜ್ಯ ಸರ್ಕಾರವು ಸಾರ್ವಜನಿಕರ ಸಾರಿಗೆ ಅವಶ್ಯಕತೆಯ ದೃಷ್ಟಿಯನ್ನು ಗಮನದಲ್ಲಿಟ್ಟುಕೊಂಡು ಕಾಲಕಾಲಕ್ಕೆ 1939ನೇ ಮೋಟಾರು ವಾಹನ ಕಾಯ್ದೆ ಪ್ರಕರಣ 68(ಡಿ) ಅಥವಾ 1988ನೇ ಮೋಟಾರು ವಾಹನ ಕಾಯ್ದೆ ಪ್ರಕರಣ 102 (1) ರನ್ವಯ ಮೂಲ ಯೋಜನೆಗಳಿಗೆ ಪ್ರಕಟಣೆಯ ಮೂಲಕ ಮಾರ್ಪಾಡು ಸೇರಿಸುವ ಮುಖಾಂತರ ತಿದ್ದುಪಡಿ ಮಾಡಿ ಈ ಕೆಳಗಿನ ಅಧಿಸೂಚನೆಗಳನ್ನು ಹೊರಡಿಸಿದೆ.

1. ಸಂ. ಹೆಚ್‌ಡಿ/111/ಟಿಎಂಪಿ/59, ದಿನಾಂಕ: 11.7.1959 ಧಾರವಾಡ, ಉತ್ತರ ಕನ್ನಡ ಜಿಲ್ಲೆಗಳು ಭಾಗಶ: ಬೆಳಗಾಂ ಮತ್ತು ಬಿಜಾಪುರ ಜಿಲ್ಲೆಗಳಿಗೆ, ಸಂಬಂಧಿಸಿದ್ದು (ಹುಬ್ಬಳ್ಳಿ, ಧಾರವಾಡ ಯೋಜನೆಯೆಂದು ಗುರುತಿಸಲ್ಪಟ್ಟಿದೆ). ಅಧಿಸೂಚನೆ ಸಂ: ಎಫ್‌ಟಿಡಿ/107/ಟಿಎಂಎ/91, ದಿನಾಂಕ: 13.7.92 ಮತ್ತು ಹೆಚ್‌ಟಿಡಿ/ 243/ಟಿಎಂಎ/99, ದಿನಾಂಕ: 14.6.2001ನ್ನು ಹೊರಡಿಸಿ ಮಾರ್ಪಾಡು ಮಾಡಿದೆ.
2. ಸಂ: ಹೆಚ್‌ಡಿ/172(2)/ಟಿಎಂಪಿ/60, ದಿನಾಂಕ: 07.06.1960 ಭಾಗಶ: ಬೆಂಗಳೂರು, ಕೋಲಾರ, ತುಮಕೂರು, ಮೈಸೂರು, ಮಂಡ್ಯ, ಚಿತ್ರದುರ್ಗ, ಹಾಸನ, ಕೊಡಗು, ದಕ್ಷಿಣ ಕನ್ನಡ, ಬಳ್ಳಾರಿ ಮತ್ತು ಚಿಕ್ಕಮಂಗಳೂರು ಜಿಲ್ಲೆಗಳ ಕೆಲವು ಭಾಗಗಳ ಮಾರ್ಗಗಳಲ್ಲಿ ಪಟ್ಟಿ ಮಾಡಿ ಲಗತ್ತಿಸಿದಂತೆ ಮೈಸೂರು ರಾಜ್ಯ ರಸ್ತೆ ಸಾರಿಗೆ ಇಲಾಖೆಯು ಪ್ರವರ್ತಿಸಲು (ಬೆಂಗಳೂರು ಯೋಜನೆಯೆಂದು ಗುರುತಿಸಲ್ಪಟ್ಟಿದೆ). ಅಧಿಸೂಚನೆ ಸಂ: ಹೆಚ್‌ಟಿಡಿ 60 ಟಿಎಂಎ 95, ದಿನಾಂಕ: 17.01.96ರಲ್ಲಿ ಮಾರ್ಪಾಡು ಮಾಡಿದೆ.
3. ಸಂ: ಹೆಚ್‌ಡಿ/200/ಟಿಎಂಪಿ/60, ದಿನಾಂಕ: 17.11.1960 ಪಟ್ಟಿ ಮಾಡಿ ಲಗತ್ತಿಸಿರುವ ಅನುಮೋದಿತ ಯೋಜನೆಯ ಕೆಲವು ಮಾರ್ಗಗಳಿಗೆ ಸಂಬಂಧಿಸಿದಂತೆ (ಮೈಸೂರು ಯೋಜನೆಯೆಂದು ಗುರುತಿಸಲ್ಪಟ್ಟಿದೆ). ಅಧಿಸೂಚನೆ ಸಂ: ಎಫ್‌ಟಿಡಿ 07 ಟಿಎಂಎ 1986, ದಿನಾಂಕ: 28.11.1987ರಲ್ಲಿ ಮಾರ್ಪಾಡು ಮಾಡಿದೆ.

4. ಸಂ: ಹೆಚ್‌ಡಿ/22/ಟಿಎಂಪಿ/64, ದಿನಾಂಕ: 18.4.1964 ಪಟ್ಟಿ ಮಾಡಿ ಲಗತ್ತಿಸಿರುವ ಅನುಮೋದಿತ ಯೋಜನೆಯ ಕೆಲವು ಮಾರ್ಗಗಳಿಗೆ ಸಂಬಂಧಿಸಿದಂತೆ (ಬಳ್ಳಾರಿ ಯೋಜನೆಯೆಂದು ಗುರುತಿಸಲ್ಪಟ್ಟಿದೆ). ಅಧಿಸೂಚನೆ ಸಂ: ಹೆಚ್‌ಡಿ 15 ಟಿಎಂಐ 1976, ದಿನಾಂಕ: 10.1.1980 ಮತ್ತು ಹೆಚ್‌ಟಿಡಿ 122 ಟಿಎಂಎ 97, ದಿನಾಂಕ: 31.3.2000ರಲ್ಲಿ ಮಾರ್ಪಾಡು ಮಾಡಿದೆ.
5. ಸಂ: ಹೆಚ್‌ಡಿ/63(2)/ಟಿಎಂಪಿ/64, ದಿನಾಂಕ: 18.03.1967 ಪಟ್ಟಿ ಮಾಡಿ ಲಗತ್ತಿಸಿರುವ ಅನುಮೋದಿತ ಯೋಜನೆಯ ಕೆಲವು ಮಾರ್ಗಗಳಿಗೆ ಸಂಬಂಧಿಸಿದಂತೆ (ಮಂಗಳೂರು ಯೋಜನೆಯೆಂದು ಗುರುತಿಸಲ್ಪಟ್ಟಿದೆ) ಅಧಿಸೂಚನೆ ಸಂ: ಹೆಚ್‌ಡಿ 113 ಟಿಎಂಎ 94, ದಿನಾಂಕ: 27.2.97 ರಲ್ಲಿ ಮಾರ್ಪಾಡು ಮಾಡಿದೆ.
6. ಸಂ: ಹೆಚ್‌ಡಿ/70(2)/ಟಿಎಂಐ/64, ದಿನಾಂಕ: 10.01.1968 ಪಟ್ಟಿ ಮಾಡಿ ಲಗತ್ತಿಸಿರುವ ಅನುಮೋದಿತ ಯೋಜನೆಯ ಕೆಲವು ಮಾರ್ಗಗಳಿಗೆ ಸಂಬಂಧಿಸಿದಂತೆ (ಕೋಲಾರ ಯೋಜನೆಯೆಂದು ಗುರುತಿಸಲ್ಪಟ್ಟಿದೆ). ಅಧಿಸೂಚನೆ ಸಂ: ಹೆಚ್‌ಡಿ:5: ಟಿಎಂಐ 76, ದಿನಾಂಕ: 10.1.80ರಲ್ಲಿ ಮಾರ್ಪಾಡು ಮಾಡಿದೆ.

ಇದಕ್ಕೆ ಸಂಬಂಧಿಸಿದಂತೆ, ದಿನಾಂಕ: 30.12.2003 ರಂದು ಕರ್ನಾಟಕ ರಾಜ್ಯಪತ್ರದ ವಿಶೇಷ ಪತ್ರಿಕೆಯಲ್ಲಿ (ಭಾಗ-4ಎ ನಂ.1732) ದಿನಾಂಕ: 31.12.2003ರಲ್ಲಿ ಅಧಿಕೃತವಾಗಿ ಸರ್ಕಾರದ ಅಧಿಸೂಚನೆ ಸಂಖ್ಯೆ: ಒಸಾಇ 134 ಟಿಎಂಎ 2003ನ್ನು ಪ್ರಕಟಿಸಿರುತ್ತದೆ. ಸದರಿ ಅಧಿಸೂಚನೆಯಲ್ಲಿ ರಾಜ್ಯದ ಎಲ್ಲಾ ಜಿಲ್ಲಾ ಕೇಂದ್ರಗಳಲ್ಲಿನ (ಬೆಂಗಳೂರು ನಗರ ಹೊರತುಪಡಿಸಿ) ನಗರ ಮಿತಿಯ 20 ಕಿಮೀ ಪರದಿಯೊಳಗೆ ಖಾಸಗೀ ಪ್ರವರ್ತಕರು ನಗರ ಸಾರಿಗೆ ಸೇವೆ ಸಲ್ಲಿಸಲು ಮೇಲ್ಕಂಡ ಎಲ್ಲಾ ಸಾರಿಗೆ ಯೋಜನೆಗಳಿಗೆ ಮಾರ್ಪಾಡು ಮಾಡಲು ಅವಕಾಶ ಕಲ್ಪಿಸಿದೆ.

ಈಗ, ಜಿಲ್ಲಾ ಕೇಂದ್ರಗಳಲ್ಲಿನ (ಬೆಂಗಳೂರು ನಗರ ಹೊರತುಪಡಿಸಿ) ನಗರ ಮಿತಿಯ 20 ಕಿಮೀ ಪರದಿಯೊಳಗೆ ಖಾಸಗಿ ಪ್ರವರ್ತಕರು ನಗರ ಸಾರಿಗೆ ಸೇವೆ ಸಲ್ಲಿಸಲು ಅವಕಾಶ ನೀಡದಿರಲು ಉದ್ದೇಶಿಸಿದೆ.

ಆದ್ದರಿಂದ, ಈಗ ಕೇಂದ್ರ ಮೋಟಾರು ವಾಹನ ಕಾಯ್ದೆ 1988 (ಕೇಂದ್ರ ಕಾಯ್ದೆ 59/1988) ಪ್ರಕರಣ 102(1)ರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಸಾರ್ವಜನಿಕ ಹಿತದೃಷ್ಟಿಯಿಂದ ಹಾಗೆ ಮಾರ್ಪಾಡು ಮಾಡುವುದು ಅಗತ್ಯವೆಂದು ಪರಿಗಣಿಸಿ ರಾಜ್ಯದ ಎಲ್ಲಾ ಜಿಲ್ಲಾ ಕೇಂದ್ರಗಳಲ್ಲಿನ (ಬೆಂಗಳೂರು ನಗರ ಹೊರತುಪಡಿಸಿ) ನಗರ ಮಿತಿಯ 20 ಕಿಮೀ ಪರದಿಯೊಳಗೆ ಖಾಸಗೀ ಪ್ರವರ್ತಕರು ನಗರ ಸಾರಿಗೆ ಸೇವೆ ಸಲ್ಲಿಸಲು ಮೇಲ್ಕಂಡ ಎಲ್ಲಾ ಸಾರಿಗೆ ಯೋಜನೆಗಳಿಗೆ ಮಾರ್ಪಾಡು ಮಾಡಲು ಉದ್ದೇಶಿಸಿದೆ.

ಈ ಸಂಬಂಧ ರಾಜ್ಯ ಸಾರಿಗೆ ಸಂಸ್ಥೆ ಹಾಗೂ ಉದ್ದೇಶಿತ ಮಾರ್ಪಾಡಿನಿಂದ ಭಾದಿತರಾಗಬಹುದಾದ ಸಾರ್ವಜನಿಕರಿಂದ ಆಕ್ಷೇಪಣೆ/ ಸಲಹೆಗಳನ್ನು ಆಹ್ವಾನಿಸಿದೆ. ಈ ಬಗ್ಗೆ ಆಕ್ಷೇಪಣೆ/ ಸಲಹೆಗಳನ್ನು ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ದಿನದಿಂದ 30 ದಿನಗಳೊಳಗಾಗಿ ಸಲ್ಲಿಸತಕ್ಕದ್ದು.

ಆಕ್ಷೇಪಣೆ/ಸಲಹೆಗಳನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಾರಿಗೆ ಇಲಾಖೆ, ಬಹುಮಹಡಿಗಳ ಕಟ್ಟಡ, ಬೆಂಗಳೂರು-1 ಇವರಿಗೆ ಸಲ್ಲಿಸತಕ್ಕದ್ದು.

**ಮೇಲಿನ ಅನುಮೋದಿತ ಸಾರಿಗೆ ಯೋಜನೆಗಳಿಗೆ ಕರಡು ಮಾರ್ಪಾಡು**

ಮೇಲ್ಕಂಡ ಯೋಜನೆಯಲ್ಲಿ ಏನೇ ಹೇಳಿದ್ದರೂ, ಆಯಾ ಸಾರಿಗೆ ಪ್ರಾಧಿಕಾರದಿಂದ ನಗರ ಸೇವೆಗಳಿಗಾಗಿ ಪರ್ಮಿಟ್‌ಗಳನ್ನು ಆದರದ್ದೇ ನಿಬಂಧನೆಗಳಡಿ ಪಡೆದುಕೊಂಡಿರುವ ಖಾಸಗಿ ಆಪರೇಟರ್‌ಗಳು ಬೆಂಗಳೂರುನಗರ ಹೊರತುಪಡಿಸಿ ಆಯಾ ಕಂದಾಯ ಜಿಲ್ಲಾ ಕೇಂದ್ರಗಳಿಂದ 20 ಕಿಮೀ. ವ್ಯಾಪ್ತಿಯಲ್ಲಿ ನಗರ ಸೇವೆಗಳನ್ನು ಒದಗಿಸಲು ಕರ್ನಾಟಕ ವಿಶೇಷ ರಾಜ್ಯಪತ್ರದ ಭಾಗ-4ಎ ನಂ.1732, ದಿನಾಂಕ: 31.12.2003ರಲ್ಲಿ ಪ್ರಕಟಿಸಿರುವ ಅಧಿಸೂಚನೆ ಸಂ: ಹೆಚ್‌ಟಿಡಿ 134 ಟಿಎಂಎ 2003, ದಿನಾಂಕ: 31.12.2003ನ್ನು ಈ ಮೂಲಕ ಹಿಂಪಡೆಯಲಾಗಿದೆ. ಆದಾಗ್ಯೂ ಸದರಿ ಅಧಿಸೂಚನೆಯ ಪ್ರಕಾರ ಈಗಾಗಲೇ ಮಂಜೂರಾತಿಯಾಗಿ ನೀಡಲಾಗಿರುವ ಪರ್ಮಿಟ್‌ಗಳು ಮತ್ತು ಟ್ರಿಪ್‌ಗಳು ಉಳಿದುಕೊಳ್ಳುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.879

**ಬಿ. ವಾಸುದೇವ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಾರಿಗೆ ಇಲಾಖೆ.

## ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳ ಕಾರ್ಯಾಲಯ ಕೋಲಾರ

## ಅಧಿಸೂಚನೆ

### ಸಂಖ್ಯೆ: ಸಿ(1) 50/2005-06 ದಿನಾಂಕ: 13ನೇ ಜೂನ್ 2005

ಡಾ: ಸಿ. ಕುಪ್ಪುಸ್ವಾಮಿ, ಜಿಲ್ಲಾ ಮಲೇರಿಯಾಧಿಕಾರಿ ಕೋಲಾರ ಇವರಿಗೆ ದಿನಾಂಕ: 9.2.2005 ರಿಂದ 20.2.2005 ರವರೆಗೆ 12 ದಿನ ಪರಿವರ್ತಿತ ರಜೆಯನ್ನು ಗೃಹಕೃತ್ಯದ ನಿಮಿತ್ತ ಮಹಾಲೇಖಪಾಲಕರು, ಬೆಂಗಳೂರು ಇವರ ಪತ್ರದ ಸಂಖ್ಯೆ: ಜೀ-14 ಎಂ-8/ಎಲ್-6/56 ದಿನಾಂಕ: 17.3.2004 ರ ಪ್ರಕಾರ ಮಂಜೂರು ಮಾಡಲಾಗಿದೆ.

ಸದರಿ ವೈದ್ಯರು ರಜೆಯ ಮೇಲೆ ತೆರಳದಿದ್ದಲ್ಲಿ ಅದೇ ಹುದ್ದೆಯಲ್ಲಿ ಮುಂದುವರಿಯುತ್ತಿದ್ದರೆಂದು ಈ ಮೂಲಕ ಪ್ರಮಾಣೀಕರಿಸಲಾಗಿದೆ.

ಜಿಲ್ಲಾ ಆರೋಗ್ಯ ಮತ್ತು ಕುಟುಂಬ
ಕಲ್ಯಾಣ ಅಧಿಕಾರಿಗಳು, ಕೋಲಾರ.

ಪಿ.ಆರ್.880

## ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ರವರ ಕಾರ್ಯಾಲಯ

### ನಂ. ಡಿಆರ್‌ಎಸ್:ಸಮಾಪನೆ:ಡಿಎಲ್‌ಎಸ್:70:2001-02 ದಿನಾಂಕ: 31ನೇ ಮೇ 2005

**ವಿಷಯ :** ಸಮಾಪನಾ ಆದೇಶಿತ ರತನ್‌ಕ್ರಾಫ್ಟ್ ಮತ್ತು ಇಂಡಸ್ಟ್ರೀಯಲ್ ಕೋ-ಆಪರೇಟಿವ್ ಸೊಸೈಟಿ ಲಿ., ಕಾರ್ಗಲ್ ಸಾಗರ ತಾ: ಪುನಃಶ್ಚೇತನದ ಬಗ್ಗೆ.

**ಉಲ್ಲೇಖ :**
1. ಈ ಕಛೇರಿಯ ಆದೇಶ ನಂ. ಡಿಆರ್‌ಎಸ್/ ಸಮಾಪನೆ/ ಡಿಎಲ್‌ಎಸ್/70/2001-02 ದಿನಾಂಕ: 19.12.2001.
2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಇವರ ಪತ್ರ ನಂ. ಎಆರ್-25/ ಸಮಾಪನೆ/ಸಿಆರ್-19/2005-06 ದಿನಾಂಕ: 21.5.2005.

ರತನ್‌ಕ್ರಾಫ್ಟ್ ಮತ್ತು ಇಂಡಸ್ಟ್ರೀಯಲ್ ಕೋ-ಆಪರೇಟಿವ್ ಸೊಸೈಟಿ ಲಿ., ಕಾರ್ಗಲ್ ಸಾಗರ ತಾ: ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರ ಕಾರ್ಯಾಲಯದ ನೋಂದಣಿ ನಂ. 124/75-76 ದಿನಾಂಕ: 6.8.1975ರಲ್ಲಿ ನೋಂದಣೆಯಾಗಿದ್ದು, ಈ ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆಯಾಗಿರುತ್ತದೆ. ಈ ಸಂಘವು ತನ್ನ ಕಾರ್ಯಾಚರಣೆಯನ್ನು ಸ್ಥಗಿತಗೊಳಿಸಿದ್ದರಿಂದ ಉಲ್ಲೇಖ (1)ರ ಈ ಕಛೇರಿಯ ಆದೇಶದಲ್ಲಿ ಸಮಾಪನೆಗೆ ಆದೇಶಿಸಿದ್ದು, ನಿರೀಕ್ಷಕರು ಸಾಗರ ತಾ: ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿದೆ. ಸಮಾಪನಾಧಿಕಾರಿಯವರು ಪ್ರಭಾರ ವಹಿಸಿಕೊಳ್ಳಲು ಸಾಧ್ಯವಾಗಿರುವುದಿಲ್ಲ. ಈ ಸಂಘದ ಸದಸ್ಯರು ಹಾಗೂ ಹಿಂದಿನ ಆಡಳಿತ ಮಂಡಳಿಯ ನಿರ್ದೇಶಕರುಗಳು ಸಮಾಪನೆಯಿಂದ ಸದಸ್ಯರಿಗೆ ತೊಂದರೆಯಾಗಿದ್ದು, ತುಂಬಾ ಕಷ್ಟವನ್ನು ಅನುಭವಿಸಲಾಗುತ್ತಿದೆ. ಅಲ್ಲದೆ ಸಂಘದಿಂದ ಸದಸ್ಯರಿಗೆ ಮತ್ತು ಸಾರ್ವಜನಿಕರಿಗೆ ಅನುಕೂಲತೆ ಇದ್ದು ಪುನಃಶ್ಚೇತನಕ್ಕಾಗಿ ಮನವಿ ಮಾಡಿಕೊಂಡಿರುತ್ತಾರೆ ಹಾಗೂ ದಿನಾಂಕ: 6.1.2005 ರಂದು ಸಭೆ ಸೇರಿ ಪುನಃಶ್ಚೇತನಕ್ಕಾಗಿ ಇಲಾಖೆ ಅಧಿಕಾರಿಯವರನ್ನು ಮನವಿ ಮಾಡಿಕೊಳ್ಳಲು ತೀರ್ಮಾನಿಸಿರುತ್ತಾರೆ. ಈ ಮನವಿಯ ಆಧಾರಿತವಾಗಿ ಉಲ್ಲೇಖ(2)ರ ಪತ್ರದಲ್ಲಿ ಸಹಾಯಕ ನಿಬಂಧಕರು, ಸಾಗರರವರು ಗ್ರಾಮಸ್ಥರ ಕೋರಿಕೆಯ ಮೇರೆಗೆ ಪುನಃಶ್ಚೇತನಕ್ಕಾಗಿ ಶಿಫಾರಸ್ ಮಾಡಿರುತ್ತಾರೆ ಹಾಗೂ ಸಮಾಪನಾಧಿಕಾರಿಯವರು ದಿನಾಂಕ: 19.5.2005 ರಂದು ಸಭೆಯ ನಡೆಸಿ ಪುನಃಶ್ಚೇತನಗೊಳಿಸಲು ತೀರ್ಮಾನಿಸಿರುತ್ತಾರೆ. ಆದಕಾರಣ ಈ ಸಂಘ ಅಸ್ತಿತ್ವದಲ್ಲಿ ಮುಂದುವರೆಯಬೇಕೆಂದು ಅಭಿಪ್ರಾಯಪಟ್ಟು ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(3) ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ನಂ.ಸಿಎಂಡಬ್ಲ್ಯೂ/69/ಸಿಎಲ್ಎಂ/2000 ದಿನಾಂಕ: 21.11.2001 ರ ಅನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಕೆ. ಈಶ್ವರಸ್ವಾಮಿ, ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ರತನ್‌ಕ್ರಾಫ್ಟ್ ಮತ್ತು ಇಂಡಸ್ಟ್ರೀಯಲ್ ಕೋ-ಆಪರೇಟಿವ್ ಸೊಸೈಟಿ ಲಿ., ಕಾರ್ಗಲ್ ಸಾಗರ ತಾ: ಇದರ ಸಮಾಪನಾ ಆದೇಶವನ್ನು ರದ್ದುಗೊಳಿಸಿ ಪುನಃಶ್ಚೇತನಗೊಳಿಸಿ ಈ ಕೆಳಕಂಡ ಷರತ್ತಿನೊಂದಿಗೆ ಆದೇಶಿಸಿರುತ್ತೇನೆ.

1. ಷೇರು ಬಂಡವಾಳವನ್ನು 3 ವರ್ಷಗಳಲ್ಲಿ ರೂ. 2 ಲಕ್ಷಗಳಿಗೆ ಹೆಚ್ಚಿಸತಕ್ಕದ್ದು ಅದರಂತೆ ಪ್ರತಿ ವರ್ಷ ಈ ಗುರಿಯ 1/3 ರಷ್ಟು ಸಾಧನೆ ಮಾಡತಕ್ಕದ್ದು.
2. ಈ ಸಂಘದ ಲೆಕ್ಕ ಪತ್ರಗಳನ್ನು ತಹಲ್‌ವರೆಗೆ ಆಡಿಟ್ ಮಾಡಿಸುವುದು.
3. ಈ ಸಂಘದ ಸಿಬ್ಬಂದಿಯವರ ವೇತನ ಹಾಗೂ ಬಲವೃಂದವನ್ನು ಇಲಾಖೆಯಿಂದ ಅನುಮತಿ ಪಡೆಯುವುದು.
4. 3 ವರ್ಷಗಳಲ್ಲಿ ರೂ. 5 ಲಕ್ಷ ಠೇವಣಿ ಹಣವನ್ನು ಸಂಗ್ರಹಿಸಲು ಪ್ರತಿ ವರ್ಷ ಗುರಿ ನಿಗದಿ ಮಾಡತಕ್ಕದ್ದು.
5. ಕಾರ್ಯವ್ಯಾಪ್ತಿಯ ಅರ್ಹರನ್ನು ಸದಸ್ಯರನ್ನಾಗಿ ಸೇರಿಸಿಕೊಳ್ಳತಕ್ಕದ್ದು.
6. ಪುನಃಶ್ಚೇತನಗೊಳಿಸಿದ ದಿನಾಂಕದಿಂದ 45 ದಿನಗಳೊಳಗಾಗಿ ಆಡಳಿತ ಮಂಡಳಿಯನ್ನು ರಚಿಸಿ ಸಂಘದ ಕಾರ್ಯಾಚರಣೆಯನ್ನು ಪ್ರಾರಂಭಿಸುವುದು ಹಾಗೂ ಪ್ರತಿ ತ್ರೈಮಾಸಿಕಕ್ಕೆ ಸಾಧಿಸಿದ ಪ್ರಗತಿ ವರದಿಯನ್ನು ಇಲಾಖೆಗೆ ಸಲ್ಲಿಸತಕ್ಕದ್ದು.

ಸಮಾಪನಾಧಿಕಾರಿಯವರು ಆಡಳಿತ ಮಂಡಳಿಯ ಪುನರ್ ರಚನೆಗಾಗಿ ಕೂಡಲೇ ಕ್ರಮವಿಟ್ಟು ಪ್ರಭಾರ ವಹಿಸಿಕೊಡಲು ಹಾಗೂ ವರದಿ ಮಾಡಲು ಸೂಚಿಸಿದೆ.

ಈ ಆದೇಶವನ್ನು ಈ ದಿನ ದಿನಾಂಕ 31ನೇ ಮೇ 2005 ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ಹೊರಡಿಸಿದೆ.

ಸಹಕಾರ ಸಂಘಗಳ ಉಪ-ನಿಬಂಧಕರು,

ಪಿ.ಆರ್.881 ಶಿವಮೊಗ್ಗ.

## ಗೃಹ ಆಯುಕ್ತರವರ ಕಛೇರಿ, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು

### ತಿದ್ದುಪಡಿ ಅಧಿಸೂಚನೆ

### ಸಂಖ್ಯೆ: ಕಗೃಮಂ:ಭೂಸ್ವಾವಿ:6:2004-05 ದಿನಾಂಕ: 30ನೇ ಮೇ 2005

ಕರ್ನಾಟಕ ರಾಜ್ಯ ಪತ್ರ ದಿನಾಂಕ: 21.4.2005, ಭಾಗ-3 ಪುಟ ಸಂಖ್ಯೆ: 545 ರಿಂದ 546 ರಲ್ಲಿ ಗೃಹ ಆಯುಕ್ತರು ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು ಇವರು ಅಧಿಸೂಚನೆ ಸಂಖ್ಯೆ: ಕಗೃಮಂ/ಭೂಸ್ವಾವಿ:6/2004-05 ದಿನಾಂಕ: 16.3.2005 ರಲ್ಲಿ ಮಂಡ್ಯ ಜಿಲ್ಲೆ, ಮದ್ದೂರು ತಾಲ್ಲೂಕು, ಕಸಬಾ ಹೋಬಳಿ ಚಾಮನಹಳ್ಳಿ ಗ್ರಾಮದ ಹಲವು ಸರ್ವೆ ನಂ. ಜಮೀನುಗಳನ್ನು ಭೂಸ್ವಾಧೀನಪಡಿಸಿಕೊಳ್ಳಲು ಗೃಹ ಮಂಡಳಿಯ ಭೂಸ್ವಾಧೀನ ಕಾಯ್ದೆಯಂತೆ ಹೊರಡಿಸಿದ 4(1)ರ ಅಧಿಸೂಚನೆಯಲ್ಲಿ ಜಿಲ್ಲೆ, ತಾಲ್ಲೂಕು, ಹೋಬಳಿ ಮತ್ತು ಗ್ರಾಮದ ಹೆಸರು ಬಿಟ್ಟು ಹೋಗಿರುವುದನ್ನು ಈ ಕೆಳಕಂಡಂತೆ ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳಲು ಸೂಚಿಸಿದೆ.

**ಅನುಸೂಚಿ**

ಜಿಲ್ಲೆ: ಮಂಡ್ಯ ತಾಲ್ಲೂಕು: ಮದ್ದೂರು ಹೋಬಳಿ: ಕಸಬಾ ಗ್ರಾಮ: ಚಾಮನಹಳ್ಳಿ

ಗೃಹ ಆಯುಕ್ತರ ಪರವಾಗಿ,

ಪಿ.ಡಿ.52 ಕರ್ನಾಟಕ ಗೃಹ ಮಂಡಳಿ, ಬೆಂಗಳೂರು.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

### ತಿದ್ದುಪಡಿ ಅಧಿಸೂಚನೆ

### ಸಂಖ್ಯೆ: ಆಕುಕ:605:ಹೆಚ್‌ಎಸ್‌ಹೆಚ್:2003 ಬೆಂಗಳೂರು, ದಿನಾಂಕ: 30ನೇ ಮೇ 2005

ದಿನಾಂಕ: 22.2.2005ರ ಸರ್ಕಾರದ ಅಧಿಸೂಚನೆಯ ಎರಡನೆ ಕಂಡಿಕೆಯ ಮೂರನೇ ಸಾಲಿನಲ್ಲಿ "ದರ್ಜೆ-2 ರ ಹುದ್ದೆಗೆ" ಎಂಬ ಪದಗಳ ನಂತರ "ವೇತನ ಶ್ರೇಣಿ ರೂ.1200-60-1500-75-2175 ರಲ್ಲಿ" ಎಂಬ ಪದಗಳನ್ನು ಸೇರಿಸಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 882 **ಸಿ. ಎಸ್. ಜಗದೀಶಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ಕಂದಾಯ ಇಲಾಖೆ**

**ಅಧಿಸೂಚನೆ ಸಂಖ್ಯೆ: ಕಂಇ:591:ಮುನೋಮು:2004 ಬೆಂಗಳೂರು, ದಿನಾಂಕ: 9ನೇ ಜೂನ್ 2005**

ಕರ್ನಾಟಕ ಮುದ್ರಾಂಕ ಅಧಿನಿಯಮ 1957ರ (1957ರ ಕರ್ನಾಟಕ ಕಾಯ್ದೆ-34) ಕಲಂ 9(1)ರ ಪ್ರಾವಿಸನ್‌ದಲ್ಲಿ ಹಾಗೂ ನೋಂದಣಿ ಕಾಯ್ದೆ, 1908ರ ಕಲಂ 78ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಮೆ: ಕೆ.ಪಿ.ಟಿ.ಸಿ.ಎಲ್. ಸಂಸ್ಥೆಗೆ ಕರ್ನಾಟಕ ಇಂಡಸ್ಟ್ರಿಯಲ್ ಏರಿಯಾ ಡೆವಲಪ್‌ಮೆಂಟ್ ಬೋರ್ಡ್‌ನಿಂದ ಹಂಚಿಕೆಯಾಗಿರುವ ಜಮೀನಿಗೆ ಮಾರುಕಟ್ಟೆ ಬೆಲೆ ರೂ.4,66,78,493 ರೂಪಾಯಿಗಳಿಗೆ ತಗಲುವ ಮುದ್ರಾಂಕ ಶುಲ್ಕ ರೂ.42,19,734 ಮತ್ತು ನೋಂದಣಿ ಶುಲ್ಕ ರೂ. 4,66,790 ರೂಪಾಯಿಗಳಲ್ಲಿ ಶೇ. 50 ರಷ್ಟು ವಿನಾಯಿತಿ ನೀಡಿ ಸರ್ಕಾರವು ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಅ.ಟಿ.ಸಂಖ್ಯೆ: ಆಇ 195, ವೆಚ್ಚ-7/05 ದಿನಾಂಕ: 09.05.2005ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 883

**ಡಿ. ಎನ್. ಶ್ರೀಮುಖಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ).

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು ಕರ್ನಾಟಕ ರಾಜ್ಯ ಸೇವಾ ನಿಯಮ 441ರ ಮೇರೆಗೆ ಶಿವಮೊಗ್ಗ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ., ಶಿವಮೊಗ್ಗ**

**ಫಾರಂ ನಂ.11**

**38ನೇಯ ರೂಲಿನ (7)ನೇಯ ಕಲಂ ಸ್ಥಿರಸ್ವತ್ತುಗಳನ್ನು ಕೊಂಡದಕ್ಕೆ ಪ್ರಕಟಣೆ**

ಶಿವಮೊಗ್ಗ ಜಿಲ್ಲೆ ಹೊಸನಗರ ತಾಲ್ಲೂಕು ಹಾಲುಗುಡ್ಡೆ ಗ್ರಾಮದ ವಾಸಿಯಾದ ಶ್ರೀ ಡಿ. ಕೆ. ಡಾಕಪ್ಪ ಬಿನ್ ಬಸವಲಿಂಗಪ್ಪ ಇವರು ಈ ಕೆಳಗೆ ತೋರಿಸಿದ ಸ್ಥಿರಸ್ವತ್ತುಗಳನ್ನು ಬಹಿರಂಗ ಹರಾಜಿನಲ್ಲಿ ಫೆಬ್ರವರಿ 2005, 4ನೇ ತಾರೀಖಿನಲ್ಲಿ ಕ್ರಯಕ್ಕೆ ಪಡೆದುಕೊಂಡಿದ್ದಾಗಿಯೂ ಮತ್ತು ದರಖಾಸ್ತು ಹಣ ರೂ.168000-00 ಗಳನ್ನು ಸಂಪೂರ್ಣವಾಗಿ ಪಾವತಿ ಮಾಡಿದ್ದಾಗಿಯೂ ಈ ಮೂಲಕ ಎಲ್ಲಾ ಜನರಿಗೆ ಬಹಿರಂಗವಾಗಿ ತಿಳಿಸೋಣವಾಗುತ್ತದೆ. ಆದ ಪ್ರಯುಕ್ತ ಸದರಿ ಸ್ಥಿರಸ್ವತ್ತುಗಳಲ್ಲಿರುವ ಬಾಕಿದಾರರು ಎಲ್ಲಾ ಹಕ್ಕು-ವ-ಪ್ರಯೋಜನಗಳಿಗೆ ಸದರಿ ಶ್ರೀ ಡಿ. ಕೆ. ಡಾಕಪ್ಪ ಬಿನ್ ಬಸವಲಿಂಗಪ್ಪ ಹಾಲುಗುಡ್ಡೆ ಹೊಸನಗರ ತಾಲ್ಲೂಕು ಇವರು ಉತ್ತರಾಧಿಕಾರಿಗಳಾಗಿದ್ದಾರೆ ಎಂಬುದಾಗಿ ಈ ಮೂಲಕ ದೃಢಪಡಿಸೋಣವಾಗಿರುತ್ತದೆ.

| ಗ್ರಾಮ ಮತ್ತು ತಾಲ್ಲೂಕು | ಸ್ಥಿರಸ್ವತ್ತುಗಳ ವಿವರ: ತರಹೆ | ಸರ್ವೆ ನಂ. | ಸ್ಥಿರಾಸ್ತಿಯ ವಿವರ | | | |
|---|---|---|---|---|---|---|
| | | | ಖಾತೆದಾರರ ಹೆಸರು | ಅಂದಾಜು ವಿಸ್ತೀರ್ಣ | ಆಕಾರ | ಷರಾ |
| 1 | 2 | 3 | 4 | 5 | 6 | 7 |
| ಹಾಲುಗುಡ್ಡೆ | ಮಳೆ ತರಿ | ಸರ್ವೆನಂ.<br>21<br>06<br>70 | ಹೆಚ್.ಬಿ. ದೇವೆಂದ್ರಪ್ಪ ಬಿನ್ ಬಸವಲಿಂಗಪ್ಪ ಹಾಲುಗುಡ್ಡೆ ಗ್ರಾಮ | 1.25<br>ಎ.ಗು<br>1.00 ಎ<br>0.20 ಗು. | -<br>-<br>- | ಸದರಿ ಸ್ವತ್ತನ್ನು ಡಿ.ಸಿ.ಸಿ. ಬ್ಯಾಂಕ್ ಶಿವಮೊಗ್ಗ ಇವರಿಗೆ ಬರಬೇಕಾದ ಬಾಕಿ ಮೊಬಲಗಿಗಾಗಿ ಬಹಿರಂಗ ಹರಾಜು ಮಾಡಿರುತ್ತದೆ. |

ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು ಕರ್ನಾಟಕ ರಾಜ್ಯ ಸೇವಾ ನಿಯಮ 441ರ ಮೇರೆಗೆ ಶಿವಮೊಗ್ಗ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ., ಶಿವಮೊಗ್ಗ

ಪಿ.ಆರ್. 884

**ವಿಶೇಷ ಭೂಸ್ವಾಧೀನಾಧಿಕಾರಿಗಳವರ ಕಛೇರಿ, ಕರ್ನಾಟಕ ಗೃಹ ಮಂಡಳಿ ಕಾವೇರಿ ಭವನ, ಬೆಂಗಳೂರು**

**ಅಧಿಸೂಚನೆ ಕ್ರಮಾಂಕ:ಭೂಸ್ವಾವಿ:3:2001-02 ದಿನಾಂಕ: 16ನೇ ಮೇ 2005**

ಭೂಸ್ವಾಧೀನ ಅಧಿನಿಯಮ 1894ರ ಅನ್ವಯ ಕರ್ನಾಟಕ ರಾಜ್ಯ ಸರ್ಕಾರದ ಅಧಿನಿಯಮ 33/1991 ರಲ್ಲಿ ತಿದ್ದುಪಡಿಯಾದಂತೆ ಭೂಸ್ವಾಧೀನ ಅಧಿನಿಯಮ 1894ರ ಅನ್ವಯ ಕಲಂ 16ರ ಪ್ರಕರಣ (2) ಉಪ ಪ್ರಕರಣ ಮೇರೆಗೆ ಈ ಮುಂದಿನ ಅನುಸೂಚಿಯಲ್ಲಿ ಸೂಚಿಸಲಾದ ಜಮೀನುಗಳನ್ನು ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ ಕರ್ನಾಟಕ ಗೃಹ ಮಂಡಳಿಯು ವಸತಿ ಯೋಜನೆಗಾಗಿ ಅಧಿಕೃತವಾಗಿ ಭೂಸ್ವಾಧೀನ ಅಧಿನಿಯಮದ ಪ್ರಕರಣ 16(1) ರಂತೆ ವಶಪಡಿಸಿಕೊಂಡಿರುತ್ತದೆ ಎಂದು ಈ ಮೂಲಕ ಪ್ರಕಟಿಸಲಾಗಿದೆ.

**ಅನುಸೂಚಿ**

**ಜಿಲ್ಲೆ:** ಕೋಲಾರ **ತಾಲ್ಲೂಕು:** ಮುಳಬಾಗಿಲು **ಹೋಬಳಿ:** ಕಸಬಾ **ಗ್ರಾಮ:** ವಿರಲಾಪುರ

| ಕ್ರ.ಸಂ. | ಸರ್ವೆ ನಂ. | ತರಹೆ | ವಿಸ್ತೀರ್ಣ ಎ-ಗುಂ | ವಶಪಡಿಸಿಕೊಂಡ ದಿನಾಂಕ |
|---|---|---|---|---|
| 1 | 35 | ಖುಷ್ಕಿ | 4-31 | 9-5-2005 |
| 2 | 38/1 | ಖುಷ್ಕಿ | 2-10<br>0-01ಖ | 9-5-2005 |
| 3. | 38/2 | ಖುಷ್ಕಿ | 0-32 | 9-5-2005 |
| 4. | 39/1ಎ | ಖುಷ್ಕಿ | 1-25 | 9-5-2005 |
| 5. | 39/1ಬಿ | ಖುಷ್ಕಿ | 0-34 | 9-5-2005 |
| 6. | 39/2 ಪೈಕಿ | ಖುಷ್ಕಿ | 0-34 | 9-5-2005 |
| | | ಒಟ್ಟು | 11-06<br>0-01ಖ | |

ವಿಶೇಷ ಭೂಸ್ವಾಧೀನಾಧಿಕಾರಿಗಳು,
ಕರ್ನಾಟಕ ಗೃಹ ಮಂಡಳಿ, ಬೆಂಗಳೂರು.

ಪಿ.ಡಿ. 53

## ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯ,
## ಆನಂದರಾವ್ ವೃತ್ತ ಬೆಂಗಳೂರು-560009

### ಅಧಿಸೂಚನೆ ಸಂಖ್ಯೆ:ವೈಶಿನಿ:ಎನ್ಆರ್‌ಸಿ(2):19:2005-06 ದಿನಾಂಕ: 20ನೇ ಜೂನ್ 2005

**ವಿಷಯ :** 2005ನೇ ಸಾಲಿನ ಶೈಕ್ಷಣಿಕ ವರ್ಷಕ್ಕೆ ಖಾಸಗಿ ನರ್ಸಿಂಗ್ ಶಾಲೆಗಳಲ್ಲಿನ ಸರ್ಕಾರಿ ಸ್ಥಾನಗಳಿಗೆ ಶುಶ್ರೂಷಾ ತರಬೇತಿಗೆ ಅರ್ಹ ಅಭ್ಯರ್ಥಿಗಳನ್ನು ಆಯ್ಕೆ ಮಾಡಲು ಅರ್ಜಿ ಆಹ್ವಾನಿಸುವ ಬಗ್ಗೆ.

ಸರ್ಕಾರದ ಅಧಿಸೂಚನೆ ಸಂಖ್ಯೆ: ಹೆಚ್‌ಎಫ್‌ಡಬ್ಲ್ಯೂ 44 ಎಂಪಿಎಸ್ 2003(3), ದಿನಾಂಕ: 3.7.2003ರ ಪ್ರಕಾರ ರಾಜ್ಯದಲ್ಲಿನ ಎಲ್ಲಾ ಖಾಸಗಿ ನರ್ಸಿಂಗ್ ಶಾಲೆಗಳ ಪ್ರವೇಶ ಮಿತಿಯ ಶೇಕಡಾ 10ರಷ್ಟು ಸ್ಥಾನಗಳಿಗೆ 2005ನೇ ಸಾಲಿನ ಶೈಕ್ಷಣಿಕ ವರ್ಷಕ್ಕೆ ಪ್ರವೇಶ ನೀಡಲು ಅರ್ಹ ಅಭ್ಯರ್ಥಿಗಳಿಂದ ಅರ್ಜಿಯನ್ನು ಆಹ್ವಾನಿಸಲಾಗಿದೆ.

ಶುಶ್ರೂಷಾ ತರಬೇತಿಯು 3 ವರ್ಷ ಆರು ತಿಂಗಳುಗಳಾಗಿದ್ದು, "ಶಿಷ್ಯವೇತನ ರಹಿತ" ವಾಗಿರುತ್ತದೆ ಹಾಗೂ ಅಭ್ಯರ್ಥಿಗಳು ತಮ್ಮ ಸ್ವಂತ ಜವಾಬ್ದಾರಿಯ ಮೇಲೆ ತರಬೇತಿ ಪಡೆಯಬೇಕಾಗಿರುತ್ತದೆ.

ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಎಫ್‌ಡಬ್ಲ್ಯೂ 2 ಎಂಎಂಇ 05, ದಿನಾಂಕ: 26.04.2005ರ ಆದೇಶದ ಅನ್ವಯ ಭಾರತೀಯ ಶುಶ್ರೂಷ ಪರಿಷತ್ತಿನ 2001ರ ಪರಿಷ್ಕೃತ ಪಠ್ಯಕ್ರಮದ ಅನುಸಾರ ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗುವುದು.

**1. ಅಭ್ಯರ್ಥಿಗಳು ಅರ್ಜಿಸಲ್ಲಿಸಲು ಈ ಕೆಳಕಂಡ ಅರ್ಹತೆಗಳನ್ನು ಹೊಂದಿರಬೇಕು.**

ಎ) ಅಭ್ಯರ್ಥಿಗಳು ಕರ್ನಾಟಕ ರಾಜ್ಯದವರಾಗಿರಬೇಕು;

ಬಿ) ಅಭ್ಯರ್ಥಿಗಳಿಗೆ ಅರ್ಜಿಸಲ್ಲಿಸಲು ಕೊನೆಯ ದಿನಾಂಕಕ್ಕೆ 17 ವರ್ಷ ಪೂರ್ಣಗೊಂಡಿರಬೇಕು ಹಾಗೂ 35 ವರ್ಷಗಳು ಮೀರಿರಬಾರದು;

ಸಿ) ಪದವಿಪೂರ್ವ ಶಿಕ್ಷಣ (ದ್ವಿತೀಯ ಪಿಯುಸಿ) ಅಥವಾ ತತ್ಸಮಾನವಾದ ಶಿಕ್ಷಣವನ್ನು ಕರ್ನಾಟಕ ರಾಜ್ಯದಲ್ಲಿ ರಾಜ್ಯ ಸರ್ಕಾರದಿಂದ ಮಾನ್ಯತೆ ಪಡೆದ ಶಿಕ್ಷಣ ಸಂಸ್ಥೆಗಳಲ್ಲಿ ವ್ಯಾಸಂಗಮಾಡಿ ಉತ್ತೀರ್ಣರಾಗಿರಬೇಕು, ವಿಜ್ಞಾನ ವಿಭಾಗದ ಭೌತಶಾಸ್ತ್ರ, ರಸಾಯನ ಶಾಸ್ತ್ರ ಮತ್ತು ಜೀವಶಾಸ್ತ್ರ (ಪಿಸಿಬಿ) ಯಲ್ಲಿ ಶೇ. 45 ಅಂಕಗಳೊಂದಿಗೆ ಉತ್ತೀರ್ಣರಾದವರಿಗೆ ಆದ್ಯತೆ ನೀಡಲಾಗುವುದು;

ಡಿ) ಅಭ್ಯರ್ಥಿಗಳು 1ನೇ ತರಗತಿಯಿಂದ 12ನೇ ತರಗತಿಯವರಿಗೆ ಕರ್ನಾಟಕ ರಾಜ್ಯದಲ್ಲಿ ರಾಜ್ಯ ಸರ್ಕಾರದಿಂದ ಮಾನ್ಯತೆ ಪಡೆದ ಶಿಕ್ಷಣ ಸಂಸ್ಥೆಗಳಲ್ಲಿ ಕನಿಷ್ಠ 7 ವರ್ಷಗಳು ವ್ಯಾಸಂಗ ಮಾಡಿರಬೇಕು (ಅದಕ್ಕೆ ಸಂಬಂಧಿಸಿದ ವ್ಯಾಸಂಗ ಪ್ರಮಾಣಪತ್ರ ಲಗತ್ತಿಸುವುದು) ಹಾಗೂ 10ನೇ ತರಗತಿ ಅಥವಾ 12ನೇ ತರಗತಿ (ದ್ವಿತೀಯ ಪಿಯುಸಿ)ಯನ್ನು ಕಡ್ಡಾಯವಾಗಿ ಕರ್ನಾಟಕ ರಾಜ್ಯದಲ್ಲಿ ವ್ಯಾಸಂಗಮಾಡಿರಬೇಕು.

ಇ) ಅಭ್ಯರ್ಥಿಯು ಪ್ರಥಮ ಹಾಗೂ ದ್ವಿತೀಯ ಪಿಯುಸಿಯನ್ನು ಕರ್ನಾಟಕ ರಾಜ್ಯದಲ್ಲಿ ರಾಜ್ಯ ಸರ್ಕಾರದಿಂದ ಮಾನ್ಯತೆ ಪಡೆದ ಶಿಕ್ಷಣ ಸಂಸ್ಥೆಗಳಲ್ಲಿ ವ್ಯಾಸಂಗ ಮಾಡಿರಬೇಕು ಅಥವಾ ಪೋಷಕರು ಕರ್ನಾಟಕ ರಾಜ್ಯದಲ್ಲಿ ರಾಜ್ಯ ಸರ್ಕಾರದಿಂದ ಮಾನ್ಯತೆ ಪಡೆದ ಶಿಕ್ಷಣ ಸಂಸ್ಥೆಗಳಲ್ಲಿ ಕನಿಷ್ಠ 7 ವರ್ಷಗಳು ವ್ಯಾಸಂಗಮಾಡಿರಬೇಕು.

ಈ) ಹೊರನಾಡ ಹಾಗೂ ಗಡಿನಾಡ ಕನ್ನಡಿಗರು ಅರ್ಜಿ ಸಲ್ಲಿಸಬಹುದಾಗಿದೆ. ಅವರಿಗೆ ಕನ್ನಡ ಓದಲು ಬರೆಯಲು ಬರಬೇಕು. ಅವರಿಗೆ ಸರಳ ಕನ್ನಡ ಲಿಖಿತ ಪರೀಕ್ಷೆ ನಡೆಸಲಾಗುವುದು. ಪರೀಕ್ಷೆಯಲ್ಲಿ ಉತ್ತೀರ್ಣರಾದವರು ಮಾತ್ರ ತರಬೇತಿಯ ಆಯ್ಕೆಗೆ ಅರ್ಹರಾಗಿರುತ್ತಾರೆ.

ಉ) ಅಭ್ಯರ್ಥಿಗಳ ಪ್ರವೇಶ ಸಂದರ್ಭದಲ್ಲಿ ಗರ್ಭವತಿಯರಾಗಿರಬಾರದು.

ಊ) ಪುರುಷ ಅಭ್ಯರ್ಥಿಗಳಿಗೆ ಒಟ್ಟು ಲಭ್ಯವಿರುವ ಸ್ಥಾನಗಳ ಪೈಕಿ ಶೇ. 5ರಷ್ಟು ಸ್ಥಾನಗಳನ್ನು ಮೀಸಲಿಡಲಾಗಿದೆ.

2. ಅಭ್ಯರ್ಥಿಗಳು ಎಸ್.ಎಸ್.ಎಲ್.ಸಿ/ ದ್ವಿತೀಯ ಪಿಯುಸಿ/ಜಾತಿ: ಆದಾಯ ಪ್ರಮಾಣ ಪತ್ರ/ ವ್ಯಾಸಂಗ ಪ್ರಮಾಣ ಪತ್ರ/ ವೈದ್ಯಕೀಯ ಪ್ರಮಾಣ ಪತ್ರಗಳನ್ನು ಅರ್ಜಿಯೊಂದಿಗೆ ಲಗತ್ತಿಸುವುದು.

3. ಅ) ಅರ್ಜಿಗಳು ರಾಜ್ಯದಲ್ಲಿ ನರ್ಸಿಂಗ್ ಶಾಲೆಗಳನ್ನು ಹೊಂದಿರುವ ವಿಕ್ಟೋರಿಯಾ ಆಸ್ಪತ್ರೆ/ ಬೌರಿಂಗ್ ಮತ್ತು ಲೇಡಿ ಕರ್ಜನ್ ಆಸ್ಪತ್ರೆ, ಬೆಂಗಳೂರು/ ಕೆ.ಆರ್. ಆಸ್ಪತ್ರೆ, ಮೈಸೂರು/ ಕೆಎಂಸಿ ಆಸ್ಪತ್ರೆ, ಹುಬ್ಬಳ್ಳಿ/ ಜಿಲ್ಲಾ ವೆನ್‌ಲಾಕ್ ಆಸ್ಪತ್ರೆ, ಮಂಗಳೂರು/ ಸಿ.ಜಿ. ಆಸ್ಪತ್ರೆ, ದಾವಣಗೆರೆ. ಜಿಲ್ಲಾ ಆಸ್ಪತ್ರೆ, ಬೆಳಗಾಂ/ ಗುಲ್ಬರ್ಗಾ/ ಬಿಜಾಪುರ/ ಬಳ್ಳಾರಿ/ ಚಿತ್ರದುರ್ಗ ಇಲ್ಲಿ ದೊರೆಯುತ್ತವೆ.

ಆ) ಅರ್ಜಿ ಶುಲ್ಕ ರೂ.100/- (ಎಸ್.ಸಿ/ ಎಸ್.ಟಿ. ಹಾಗೂ ಪ್ರವರ್ಗ-1ಕ್ಕೆ ರೂ.50/-) ನಿಗದಿಪಡಿಸಲಾಗಿದೆ.

ಇ) ಅಭ್ಯರ್ಥಿಗಳು ನೀವು ಅರ್ಜಿ ಪಡೆಯಲಿಚ್ಛಿಸುವ ಸಂಸ್ಥೆಯ ಅಧೀಕ್ಷಕರು/ ಜಿಲ್ಲಾ ಶಸ್ತ್ರಚಿಕಿತ್ಸಕರು ಇವರ ಹೆಸರಿನಲ್ಲಿ ರಾಷ್ಟ್ರೀಕೃತ ಬ್ಯಾಂಕುಗಳಿಂದ ಪಡೆದ ಡಿ.ಡಿ. ಮುಖಾಂತರ ಅರ್ಜಿ ಪಡೆಯಬಹುದಾಗಿದೆ.

ಈ) ಅಭ್ಯರ್ಥಿಗಳು ಅರ್ಜಿಗಳನ್ನು ಕನ್ನಡದಲ್ಲಿ ಸ್ವಂತ ಬರವಣಿಗೆಯಲ್ಲಿ ಭರ್ತಿ ಮಾಡಿರಬೇಕು.

ಉ) ಅಭ್ಯರ್ಥಿಗಳು ಇತ್ತೀಚಿನ ಭಾವಚಿತ್ರವನ್ನು ಅರ್ಜಿಯೊಂದಿಗೆ ಲಗತ್ತಿಸಬೇಕು.

3. ಅ) ಅರ್ಜಿಗಳನ್ನು ರಾಜ್ಯದ 11 ಸರ್ಕಾರಿ ನರ್ಸಿಂಗ್ ಶಾಲೆಗಳಲ್ಲಿ ಕೆಲಸದ ದಿನಗಳಂದು ದಿನಾಂಕ: 5.7.2005 ರಿಂದ 19.7.2005 ರವರೆಗೆ ಬೆಳಿಗ್ಗೆ 10.00 ಗಂಟೆಯಿಂದ ಸಂಜೆ 4.00 ಗಂಟೆಯವರೆಗೆ ಪಡೆಯಬಹುದಾಗಿದೆ.

ಆ) ಅಭ್ಯರ್ಥಿಗಳು ರಾಜ್ಯದ 11 ಸರ್ಕಾರಿ ನರ್ಸಿಂಗ್ ಶಾಲೆಗಳಲ್ಲಿ ಅರ್ಜಿ ಪಡೆದು, ದಿನಾಂಕ: 21.7.2005 ರೊಳಗಾಗಿ ಅದೇ ಸಂಸ್ಥೆಗೆ ಸಲ್ಲಿಸತಕ್ಕದ್ದು.

ಇ) ನಿಗದಿತ ದಿನಾಂಕದ ನಂತರ ಬರುವ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ ಹಾಗೂ ಈ ವಿಷಯದಲ್ಲಿ ಯಾವುದೇ ಪತ್ರ ವ್ಯವಹಾರಕ್ಕೆ ಆಸ್ಪದವಿರುವುದಿಲ್ಲ.

ಈ) ಅಭ್ಯರ್ಥಿಗಳನ್ನು ಮೆರಿಟ್ ಮತ್ತು ಮೀಸಲಾತಿಗನುಗುಣವಾಗಿ ಆಯ್ಕೆ ಮಾಡಲಾಗುವುದು.

ಉ) ಅರ್ಜಿ ಫಾರಂಗಳನ್ನು ಒಳಗೊಂಡ ಲಕೋಟೆಯ ಮೇಲೆ 2005ನೇ ಸಾಲಿನ ಸರ್ಕಾರಿ ಕೋಟಾದ ಅಡಿಯಲ್ಲಿ ಶುಶ್ರೂಷಾ ತರಬೇತಿ ಪ್ರವೇಶಕ್ಕಾಗಿ ಅರ್ಜಿ ಎಂದು ದಪ್ಪ ಅಕ್ಷರಗಳಲ್ಲಿ ಬರೆಯತಕ್ಕದ್ದು.

4. ರಾಜ್ಯದ ಎಲ್ಲಾ ಖಾಸಗಿ ನರ್ಸಿಂಗ್ ಶಾಲೆಗಳು ತಮ್ಮ ಪ್ರವೇಶ ಮಿತಿಯ ಶೇಕಡಾ 10 ರಷ್ಟು ಸ್ಥಾನಗಳನ್ನು ಸರ್ಕಾರದ ವತಿಯಿಂದ ಭರ್ತಿಮಾಡಲು ಕಾಯ್ದಿರಿಸುವುದು.

ಪಿ.ಆರ್.912 ವೈದ್ಯಕೀಯ ಶಿಕ್ಷಣ ನಿರ್ದೇಶಕರು

## ಪೊಲೀಸ್ ಕಮೀಷನರ್ ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ

## ಅಧಿಸೂಚನೆ ಸಂಖ್ಯೆ: 13:ಸಂವಿ:ಸಿಓಪಿ:2005 ದಿನಾಂಕ: 22ನೇ ಜೂನ್, 2005

ಬೆಂಗಳೂರು ನಗರ ಹೃದಯ ಭಾಗದಲ್ಲಿ ಪ್ರಮುಖ ಶಾಲೆಗಳು ಇದ್ದು ಇವುಗಳ ಅಜುಬಾಜುಗಳಲ್ಲಿ ಇರುವ ರಸ್ತೆಗಳು ಸಹ ಪ್ರಮುಖವಾಗಿದ್ದು, ಈ ರಸ್ತೆಗಳಲ್ಲಿ ಮುಂಜಾನೆಯಿಂದ ರಾತ್ರಿಯ ಬಹುವೇಳೆಯವರೆಗೆ ವಾಹನ ಸಂಚಾರ ದಟ್ಟಣೆಯು ಅಧಿಕವಾಗಿರುತ್ತೆ. ಈ ರಸ್ತೆಗಳಿಗೆ ಇರುವ ಪಾದಚಾರಿ ರಸ್ತೆಗಳು ಸಾಕಷ್ಟು ವಿಶಾಲವಾಗಿರುವುದಿಲ್ಲ. ಈ ಶಾಲೆಗಳಿಗೆ ಪೋಷಕರು ತಮ್ಮ ಮಕ್ಕಳನ್ನು ಕರೆತರುವ ವಾಹನಗಳನ್ನು ಶಾಲೆಯ ಮುಂದೆ ಜೋಡಿ ಜೋಡಿಯಾಗಿ ನಿಲ್ಲಿಸಿ ಇತರೆ ವಾಹನಗಳ ಮತ್ತು ಪಾದಚಾರಿಗಳ ಸುಗಮ ಸಂಚಾರಕ್ಕೆ ಅಡಚಣೆ ಉಂಟು ಮಾಡುವುದಲ್ಲದೆ ಶಾಲೆಗಳ ಅಜುಬಾಜು ಸ್ಥಳಗಳಲ್ಲಿ ಸಂಚಾರ ಸ್ಥಗಿತಗೊಂಡು ಇದನ್ನು ತಹಬಂದಿಗೆ ತರುವುದು ಕಷ್ಟಸಾಧ್ಯವಾಗುತ್ತಿದೆ.

ಬೆಂಗಳೂರು ನಗರದಲ್ಲಿ ಸುರಕ್ಷಿತ ಸಂಚಾರ ವ್ಯವಸ್ಥೆಯನ್ನು ಜಾರಿಗೆ ತರುವ ದೃಷ್ಟಿಯಿಂದ ಕರ್ನಾಟಕ ಸರ್ಕಾರವು ಸುತ್ತೋಲೆ ಸಂಖ್ಯೆ: ಇಡಿ 52 ಪಿಎಂಎ 2005 ತಾ: 27.05.2005 ರಲ್ಲಿ 2005-06ನೇ ಶೈಕ್ಷಣಿಕ ಸಾಲಿನಿಂದ ಸಿಬಿಎಸ್‌ಇ/ಐಸಿಎಸ್‌ಇ ಶಾಲೆಗಳೂ ಸೇರಿದಂತೆ ರಾಜ್ಯ ಪಠ್ಯಕ್ರಮ ಪಾಲಿಸುವ ಎಲ್ಲ ಆಂಗ್ಲ ಮಾಧ್ಯಮ ಶಾಲೆಗಳನ್ನು ಬೆಳಿಗ್ಗೆ 8.30 ಗಂಟೆ ಅಥವಾ ಅದರೊಳಗೆ ಶಾಲೆಗಳನ್ನು ಪ್ರಾರಂಭಿಸಬೇಕೆಂದು, ಈ ಶಾಲೆಗಳ ಮಕ್ಕಳಿಗೆ ಶಾಲೆಗೆ ಬರಲು ಮತ್ತು ಮನೆಗೆ ಹೋಗುವುದಕ್ಕೆ ಶಾಲೆಯ ಆಡಳಿತವು ಅಗತ್ಯ ಬಸ್ಸಿನ ಏರ್ಪಾಡು ಮಾಡಲು, ಅಗತ್ಯವಿದ್ದಲ್ಲಿ ಬಿ.ಎಂ.ಟಿ.ಸಿ. ಬಸ್ಸುಗಳನ್ನು ಉಪಯೋಗಿಸಿಕೊಳ್ಳಲು ಆದೇಶಿಸಲಾಗಿದೆ.

ಈ ಹಿನ್ನೆಲೆಯಲ್ಲಿ ಶಾಲೆಗಳ ಅಜುಬಾಜುಗಳಲ್ಲಿರುವ ರಸ್ತೆಗಳಲ್ಲಿ ಸಂಚಾರವು ಸ್ಥಗಿತಗೊಳ್ಳದಂತೆ ಕ್ರಮ ಕೈಗೊಂಡು ಸಾರ್ವಜನಿಕ ವಾಹನಗಳ ಮತ್ತು ಪಾದಚಾರಿಗಳ ಹಾಗೂ ಈ ಶಾಲೆಗಳಿಗೆ ಬರುವ ಪೋಷಕರ ಮತ್ತು ಮಕ್ಕಳ ಸುರಕ್ಷತೆ ದೃಷ್ಟಿಯಿಂದ ಶಾಲೆಗಳ ಸಮೀಪ ವಾಹನಗಳ ನಿಲುಗಡೆಯನ್ನು ನಿರ್ಬಂಧಿಸುವುದು ಅವಶ್ಯಕವಾಗಿರುತ್ತೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನ್ನ ಅಧಿಕಾರ ವ್ಯಾಪ್ತಿಯಲ್ಲಿರುವ ಅಧಿಕಾರವನ್ನು ಚಲಾಯಿಸಿ ಡಾ: ಅಜಯಕುಮಾರ ಸಿಂಹ, ಐ.ಪಿ.ಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಬೆಂಗಳೂರು ನಗರದ ಸರ್ಕಾರವು ಸುತ್ತೋಲೆಯಲ್ಲಿ ಹೆಸರಿಸಿರುವ ಈ ಕೆಳಕಂಡ ಶಾಲೆಗಳ ಅಜುಬಾಜಿನ ರಸ್ತೆಗಳಲ್ಲಿ ಶಾಲೆಯ ವಾಹನಗಳನ್ನು ಹೊರತುಪಡಿಸಿ ಇನ್ನುಳಿದ ಖಾಸಗಿ ವಾಹನಗಳು ಶಾಲೆಯಿಂದ 200 ಮೀಟರ್ ಅಂತರದವರೆಗೆ ನಿಲುಗಡೆಯಾಗದಂತೆ ಹಾಗೂ ಈ ಅಂತರದಲ್ಲಿ ಯಾವುದೇ ಖಾಸಗಿ ವಾಹನಗಳಿಂದ ಪ್ರಯಾಣಿಕರನ್ನಾಗಲೀ ಅಥವಾ ಶಾಲಾ ಮಕ್ಕಳನ್ನು ಇಳಿಸಲು ವಾಹನಗಳು ನಿಲುಗಡೆಯಾಗುವುದನ್ನು ನಿರ್ಬಂಧಿಸಿ ಆದೇಶಿಸಿರುತ್ತೇನೆ.

1. ಬಾಲ್ಡ್ವಿನ್ ಬಾಯ್ಸ್ ಸ್ಕೂಲ್, ಹೊಸೂರು ರಸ್ತೆ
2. ಬಾಲ್ಡ್ವಿನ್ ಗರ್ಲ್ಸ್ ಸ್ಕೂಲ್, ರಿಚ್‌ಮಂಡ್ ರಸ್ತೆ
3. ಬಿಷಪ್ ಕಾಟನ್ ಗರ್ಲ್ಸ್ ಸ್ಕೂಲ್, ಸೆಂಟ್ ಮಾರ್ಕ್ಸ್ ರಸ್ತೆ
4. ಬಿಷಪ್ ಕಾಟನ್ ಬಾಯ್ಸ್ ಸ್ಕೂಲ್, ರೆಸಿಡೆನ್ಸಿ ರಸ್ತೆ
5. ಕೇಂದ್ರೀಯ ವಿದ್ಯಾಲಯ, ವಿಕ್ಟೋರಿಯ ರಸ್ತೆ
6. ಸೆಕ್ರೇಡ್ ಹಾರ್ಟ್ ಹೈಸ್ಕೂಲ್, ರೆಸಿಡೆನ್ಸಿ ರಸ್ತೆ
7. ಸೆಂಟ್ ಮೀರಾ ಸ್ಕೂಲ್, ಕೇಂಬ್ರಿಡ್ಜ್ ರಸ್ತೆ
8. ನ್ಯಾಷನಲ್ ಪಬ್ಲಿಕ್ ಸ್ಕೂಲ್, ಇಂದಿರಾನಗರ
9. ಸೋಫಿಯಾ ಸ್ಕೂಲ್, ಪ್ಯಾಲೇಸ್ ರಸ್ತೆ
10. ಸೆಂಟ್ ಚಾರ್ಲ್ಸ್ ಸ್ಕೂಲ್, ಹೆಣ್ಣೂರ್ ರಸ್ತೆ
11. ಸೆಂಟ್ ಜಾನ್ಸ್ ಸ್ಕೂಲ್, ಪ್ರಾಮಿನೆಡೆ ರಸ್ತೆ
12. ಗುಡ್ ಶೆಫರ್ಡ್ಸ್ ಸ್ಕೂಲ್, ಕಾನ್ವೆಂಟ್ ರಸ್ತೆ
13. ಸೆಂಟ್ ಅನ್ಸ್ ಸ್ಕೂಲ್, ಮಿಲ್ಲರ್ ರಸ್ತೆ
14. ಫ್ರಾನ್ಸಿಸ್ ಕ್ಷೇವಿಯರ್ ಸ್ಕೂಲ್, ಪ್ರಾಮಿನೆಡೆ ರಸ್ತೆ
15. ಫ್ರಾಂಕ್ ಅಂತೋಣಿ ಸ್ಕೂಲ್, ಕೇಂಬ್ರಿಡ್ಜ್ ರಸ್ತೆ
16. ಸೆಂಟ್ ಜರ್ಮನ್ ಸ್ಕೂಲ್, ಪ್ರಾಮಿನೆಡೆ ರಸ್ತೆ

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ಶಾಲೆಗಳ ಬಳಿ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 1.07.2005 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿವಸ ಅಂದರೆ ದಿನಾಂಕ: 22.06.2005 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

ಪಿ.ಆರ್.913

**ಡಾ: ಅಜಯಕುಮಾರ ಸಿಂಹ**

ಪೊಲೀಸ್ ಕಮೀಷನರ್, ಬೆಂಗಳೂರು ನಗರ.

## ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ ಬೆಂಗಳೂರು

## ಅಂತಿಮ ಅಧಿಸೂಚನೆ

## ನಂ: ಕೆಎಸ್‌ಎ:ಸಿಆರ್:13:2004-2005 ದಿನಾಂಕ: 30ನೇ ಮೇ 2005

ನಂ. ಕೆಎಸ್‌ಎ: ಸಿಆರ್:13/04-05, ದಿನಾಂಕ: 3.2.2005ರ ಪ್ರಿಲಿಮಿನರಿ ಅಧಿಸೂಚನೆಯನ್ನು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಿ ಅದರಲ್ಲಿ ಸದರಿ ಅಧಿಸೂಚನೆಯ ಷೆಡ್ಯೂಲ್‌ನಲ್ಲಿರುವ ಬೆಂಗಳೂರು ನಗರ ಅಂಬೇಡ್ಕರ್ ಕಾಲೋನಿ (ಮಾಂಕಾಳಮ್ಮನ ತೋಟ) ಕೊಳಚೆ ಪ್ರದೇಶವನ್ನು ಕರ್ನಾಟಕ

ಕೊಳಚೆ ಪ್ರದೇಶಗಳ (ನಿರ್ಮೂಲನೆ ಮತ್ತು ಅಭಿವೃದ್ಧಿ) ಕಾಯ್ದೆ 1973ರ ಸೆಕ್ಷನ್ 3 ರಡಿಯಲ್ಲಿ ಪ್ರಾರಂಭಿಕವಾಗಿ ಕೊಳಚೆ ಪ್ರದೇಶವೆಂದು ಘೋಷಿಸಿ ಸಂಬಂಧಿಸಿದವರಿಂದ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿತ್ತು.

ಸದರಿ ಪ್ರಿಲಿಮಿನರಿ ಅಧಿಸೂಚನೆಗೆ ಸಂಬಂಧಿಸಿದಂತೆ ಆಕ್ಷೇಪಣೆಗಳು ಯಾವುದೂ ಬಂದಿರುವುದಿಲ್ಲ. ಈ ಬಗ್ಗೆ ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿಯವರು ವರದಿ ಸಲ್ಲಿಸಿ ಈ ಪ್ರದೇಶದಲ್ಲಿ ಗುಡಿಸಲು ಇರುವುದರಿಂದ ಹಾಗೂ ಈ ಪ್ರದೇಶವು ಕೊಳಚೆ ಗುಣಲಕ್ಷಣಗಳನ್ನು ಹೊಂದಿರುವುದರಿಂದ ಇವರ ಆಕ್ಷೇಪಣೆಗಳು ಬಂದಿರುವುದಿಲ್ಲವಾದ್ದರಿಂದ ಸದರಿ ಕೊಳಚೆ ಪ್ರದೇಶವೆಂದು ಅಂತಿಮವಾಗಿ ಘೋಷಿಸುವಂತೆ ತಿಳಿಸಿರುತ್ತಾರೆ.

ಪ್ರಶ್ನಿತ ಕೊಳಚೆ ಪ್ರದೇಶದಲ್ಲಿ ಗುಡಿಸಲು/ಮನೆಗಳು ದುರಸ್ಥಿ ಇಲ್ಲದೇ ಕುಡಿಯುವ ನೀರು, ದೀಪ, ರಸ್ತೆ, ಚರಂಡಿ ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದೇ ಅನಾರೋಗ್ಯದ ವಾತಾವರಣ ಉಂಟಾಗಿರುತ್ತದೆ. ಸದರಿ ಪ್ರದೇಶವನ್ನು ಅಭಿವೃದ್ಧಿಪಡಿಸುವುದು ಅತ್ಯಗತ್ಯವಾಗಿರುತ್ತದೆ. ಆದ್ದರಿಂದ ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಸೆಕ್ಷನ್ 3 ರಡಿಯಲ್ಲಿ ದತ್ತವಾಗಿರುವ ಅಧಿಕಾರದಂತೆ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಮೇಲ್ಕಂಡ ಕಾಯ್ದೆಯ ಸೆಕ್ಷನ್ 3 ರಡಿಯಲ್ಲಿ ಅಂತಿಮವಾಗಿ ಕೊಳಚೆ ಪ್ರದೇಶವೆಂದು ಘೋಷಿಸಿರುತ್ತೇನೆ.

**ಷೆಡ್ಯೂಲ್**

ಬೆಂಗಳೂರು ದಕ್ಷಿಣ ತಾಲ್ಲೂಕು ವ್ಯಾಪ್ತಿಯ ಕೆಂಗೇರಿ ಪುರಸಭೆ ವ್ಯಾಪ್ತಿಯ ಅಂಬೇಡ್ಕರ್ ಕಾಲೋನಿ (ಮಾಂಕಾಳಮ್ಮನ ತೋಟ) ಇಲ್ಲಿರುವ ಕೊಳಚೆ ಪ್ರದೇಶದ ಚೆಕ್ಕುಬಂದಿ ಮತ್ತು ಹದ್ದುಬಸ್ತು ತಃಖ್ತೆ.

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಮಾಲೀಕರ ಹೆಸರು | ಸರ್ವೆ ನಂ. | ವಿಸ್ತೀರ್ಣ (ಚ.ಅ) | ಚೆಕ್ಕುಬಂದಿಗಳು | | | |
|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1. | ಅಂಬೇಡ್ಕರ್ ಕಾಲೋನಿ (ಮಾಂಕಾಳಮ್ಮನ ತೋಟ) | ಸರ್ಕಾರಿ ತೋಪು | 177 | 0.25 ಗುಂಟೆ | ಬಿ.ಡಿ.ಎ. ಲೇಔಟ್ | ಹಳ್ಳ | ಹಳ್ಳ | ರಿ.ಸ.ನಂ. 177ರ ಉಳಿಕೆ ಜಮೀನು |

ಎಂ. ಎ. ಸಾಧಿಕ್

ಪಿ.ಆರ್.886 ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು.

## ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ ಬೆಂಗಳೂರು
## ಅಂತಿಮ ಅಧಿಸೂಚನೆ
## ನಂ: ಕೆಎಸ್‌ಎ:ಸಿಆರ್:41:2001-2002 ದಿನಾಂಕ: 30ನೇ ಮೇ 2005

ನಂ. ಕೆಎಸ್‌ಎ: ಸಿಆರ್:41/01-02, ದಿನಾಂಕ: 25.10.2004ರ ಪ್ರಿಲಿಮಿನರಿ ಅಧಿಸೂಚನೆಯನ್ನು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಿ ಅದರಲ್ಲಿ ಸದರಿ ಅಧಿಸೂಚನೆಯ ಷೆಡ್ಯೂಲ್‌ನಲ್ಲಿರುವ ಬೆಂಗಳೂರು ನಗರ ಜಯನಗರ ಟಿ. ಬಿ. ಆಸ್ಪತ್ರೆ ಕಾಂಪೌಂಡ್ ಪಕ್ಕದಲ್ಲಿರುವ ಕೊಳಚೆ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ನಿರ್ಮೂಲನೆ ಮತ್ತು ಅಭಿವೃದ್ಧಿ) ಕಾಯ್ದೆ 1973ರ ಸೆಕ್ಷನ್ 3 ರಡಿಯಲ್ಲಿ ಪ್ರಾರಂಭಿಕವಾಗಿ ಕೊಳಚೆ ಪ್ರದೇಶವೆಂದು ಘೋಷಿಸಿ ಸಂಬಂಧಿಸಿದವರಿಂದ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿತ್ತು.

ಸದರಿ ಪ್ರಿಲಿಮಿನರಿ ಅಧಿಸೂಚನೆಗೆ ಸಂಬಂಧಿಸಿದಂತೆ ಈ ಬಗ್ಗೆ ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿಯವರು ವರದಿ ಸಲ್ಲಿಸಿ ಈ ಪ್ರದೇಶದಲ್ಲಿ ಗುಡಿಸಲು ಇರುವುದರಿಂದ ಹಾಗೂ ಈ ಪ್ರದೇಶವು ಕೊಳಚೆ ಗುಣಲಕ್ಷಣಗಳನ್ನು ಹೊಂದಿರುವುದರಿಂದ ಮತ್ತು ಯಾವುದೇ ಆಕ್ಷೇಪಣೆಗಳು ಬಾರದೇ ಇರುವುದರಿಂದ ಸದರಿ ಕೊಳಚೆ ಪ್ರದೇಶವೆಂದು ಅಂತಿಮವಾಗಿ ಘೋಷಿಸುವಂತೆ ತಿಳಿಸಿರುತ್ತಾರೆ.

ಪ್ರಶ್ನಿತ ಕೊಳಚೆ ಪ್ರದೇಶದಲ್ಲಿ ಗುಡಿಸಲು/ಮನೆಗಳು ದುರಸ್ಥಿ ಇಲ್ಲದೇ ಕುಡಿಯುವ ನೀರು, ದೀಪ, ರಸ್ತೆ, ಚರಂಡಿ ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದೇ ಅನಾರೋಗ್ಯದ ವಾತಾವರಣ ಉಂಟಾಗಿರುತ್ತದೆ. ಸದರಿ ಪ್ರದೇಶವನ್ನು ಅಭಿವೃದ್ಧಿಪಡಿಸುವುದು ಅತ್ಯಗತ್ಯವಾಗಿರುತ್ತದೆ. ಆದ್ದರಿಂದ ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಸೆಕ್ಷನ್ 3 ರಡಿಯಲ್ಲಿ ದತ್ತವಾಗಿರುವ ಅಧಿಕಾರದಂತೆ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಮೇಲ್ಕಂಡ ಕಾಯ್ದೆಯ ಸೆಕ್ಷನ್ 3 ರಡಿಯಲ್ಲಿ ಅಂತಿಮವಾಗಿ ಕೊಳಚೆ ಪ್ರದೇಶವೆಂದು ಘೋಷಿಸಿರುತ್ತೇನೆ.

**ಷೆಡ್ಯೂಲ್**

ಬೆಂಗಳೂರುನಗರ ಬೆಂಗಳೂರು ಮಹಾನಗರ ಪಾಲಿಕೆಯ ವ್ಯಾಪ್ತಿಯ, ಜಯನಗರ ಟಿ.ಬಿ. ಆಸ್ಪತ್ರೆಯ ಕಾಂಪೌಂಡ್ ಪಕ್ಕದ ಬೈರಸಂದ್ರ ಸರ್ವೆ ನಂ. 1/4ರ ಬೆಂಗಳೂರು ಇಲ್ಲಿರುವ ಕೊಳಚೆ ಪ್ರದೇಶದ ಚೆಕ್ಕುಬಂದಿ ಮತ್ತು ಹದ್ದುಬಸ್ತು ತಃಖ್ತೆ.

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಮಾಲೀಕರ ಹೆಸರು | ಸರ್ವೆ ನಂ. | ವಿಸ್ತೀರ್ಣ (ಚ.ಅ) | ಚೆಕ್ಕುಬಂದಿಗಳು | | | |
|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1. | ಜಯನಗರ ಟಿ.ಬಿ. ಆಸ್ಪತ್ರೆ ಕಾಂಪೌಂಡ್ ಪಕ್ಕದಲ್ಲಿರುವ ಕೊಳಚೆ ಪ್ರದೇಶ | ಬಿ.ಡಿ.ಎ. | 1/4 | 0.08 ಗುಂಟೆ | ಸುಬ್ಬರಾಯರು ಮತ್ತು ಶ್ರೀರಾಂರವರ ಮನೆಗಳು | ಟಿ.ಬಿ. ಸ್ಯಾನಿಟೋರಿಯಂ ಕಾಂಪೌಂಡ್ | ಟಿ. ಬಿ. ಆಸ್ಪತ್ರೆ ಕಾಂಪೌಂಡ್ | ತ್ಯಾಗರಾಜ್ ರವರ ಆಸ್ತಿ |

ಎಂ. ಎ. ಸಾಧಿಕ್

ಪಿ.ಆರ್.887 ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು.

## ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ ಬೆಂಗಳೂರು
## ಅಂತಿಮ ಅಧಿಸೂಚನೆ
## ನಂ: ಕೆಎಸ್‌ಎ:ಸಿಆರ್:48:2003-2004 ದಿನಾಂಕ: 30ನೇ ಮೇ 2005

ನಂ. ಕೆಎಸ್‌ಎ: ಸಿಆರ್:48/03-04, ದಿನಾಂಕ: 18.4.2004ರ ಪ್ರಿಲಿಮಿನರಿ ಅಧಿಸೂಚನೆಯನ್ನು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಿ ಅದರಲ್ಲಿ ಸದರಿ ಅಧಿಸೂಚನೆಯ ಷೆಡ್ಯೂಲ್‌ನಲ್ಲಿರುವ ಬೆಂಗಳೂರು ನಗರ ಗುಲ್ಬರ್ಗಾ ಸಂ.2, ಪೀಣ್ಯ ಸ.ನಂ.44, 45, ಬೆಂಗಳೂರು ಕೊಳಚೆ

ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ನಿರ್ಮೂಲನೆ ಮತ್ತು ಅಭಿವೃದ್ಧಿ) ಕಾಯ್ದೆ 1973ರ ಸೆಕ್ಷನ್ 3 ರಡಿಯಲ್ಲಿ ಪ್ರಾರಂಭಿಕವಾಗಿ ಕೊಳಚೆ ಪ್ರದೇಶವೆಂದು ಘೋಷಿಸಿ ಸಂಬಂಧಿಸಿದವರಿಂದ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿತ್ತು.

ಸದರಿ ಪ್ರಿಲಿಮಿನರಿ ಅಧಿಸೂಚನೆಗೆ ಸಂಬಂಧಿಸಿದಂತೆ ಆಕ್ಷೇಪಣೆಗಳು ಯಾವುದೂ ಬಂದಿರುವುದಿಲ್ಲ. ಈ ಬಗ್ಗೆ ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿಯವರು ವರದಿ ಸಲ್ಲಿಸಿ ಈ ಪ್ರದೇಶದಲ್ಲಿ ಗುಡಿಸಲು ಇರುವುದರಿಂದ ಹಾಗೂ ಈ ಪ್ರದೇಶವು ಕೊಳಚೆ ಗುಣಲಕ್ಷಣಗಳನ್ನು ಹೊಂದಿರುವುದರಿಂದ ಇದನ್ನು ಕೊಳಚೆ ಪ್ರದೇಶವೆಂದು ಅಂತಿಮವಾಗಿ ಘೋಷಿಸುವಂತೆ ತಿಳಿಸಿರುತ್ತಾರೆ.

ಪ್ರಶ್ನಿತ ಕೊಳಚೆ ಪ್ರದೇಶದಲ್ಲಿ ಗುಡಿಸಲು/ಮನೆಗಳು ದುರಸ್ಥಿ ಇಲ್ಲದೇ ಕುಡಿಯುವ ನೀರು, ದೀಪ, ರಸ್ತೆ, ಚರಂಡಿ ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದೇ ಅನಾರೋಗ್ಯದ ವಾತಾವರಣ ಉಂಟಾಗಿರುತ್ತದೆ. ಸದರಿ ಪ್ರದೇಶವನ್ನು ಅಭಿವೃದ್ಧಿಪಡಿಸುವುದು ಅತ್ಯಗತ್ಯವಾಗಿರುತ್ತದೆ. ಆದ್ದರಿಂದ ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಸೆಕ್ಷನ್ 3 ರಡಿಯಲ್ಲಿ ದತ್ತವಾಗಿರುವ ಅಧಿಕಾರದಂತೆ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಮೇಲ್ಕಂಡ ಕಾಯ್ದೆಯ ಸೆಕ್ಷನ್ 3 ರಡಿಯಲ್ಲಿ ಅಂತಿಮವಾಗಿ ಕೊಳಚೆ ಪ್ರದೇಶವೆಂದು ಘೋಷಿಸಿರುತ್ತೇನೆ.

**ಷೆಡ್ಯೂಲ್**

ಬೆಂಗಳೂರು ಉತ್ತರ ತಾಲ್ಲೂಕು ವ್ಯಾಪ್ತಿಯ ಯಶವಂತಪುರ ಹೋಬಳಿ, ಪೀಣ್ಯ ಸ.ನಂ.44, 45, ರಲ್ಲಿನ ಗುಲ್ಬರ್ಗಾ ಸ್ಲಂ.2ರ ಚೆಕ್ಕುಬಂದಿ ಮತ್ತು ಹದ್ದುಬಸ್ತು ತಃಖ್ತೆ.

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಮಾಲೀಕರ ಹೆಸರು | ಸರ್ವೆ ನಂ. | ವಿಸ್ತೀರ್ಣ (ಚ.ಅ) | ಚೆಕ್ಕುಬಂದಿಗಳು | | | |
|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1. | ಗುಲ್ಬರ್ಗ ಸ್ಲಂ.2, ಪೀಣ್ಯ ಸ.ನಂ.44, 45, ಬೆಂಗಳೂರು | 1.ಅ.ಕ.ಎಲ್ ಪ್ರಹ್ಲಾದ್‌ರಾವ್ ವಗೈರೆ 2.ಬಸಮ್ಮ ಕೋಂ ಈರಪ್ಪ | 44ರ ಪೈಕಿ 45/9 ರ ಪೈಕಿ | 0.01 ಗುಂಟೆ 0.06 ಗುಂಟೆ | ಖಾಸಗಿ ಮನೆ ಖಾಸಗಿ ಮನೆಗಳು | ಖಾಲಿ ಪ್ರದೇಶ ಖಾಸಗಿ ಜಮೀನು | ಖಾಸಗಿ ಮನೆ ಖಾಸಗಿ ಮನೆ | ರಸ್ತೆ ಖಾಲಿ ಪ್ರದೇಶ |

**ಎಂ. ಎ. ಸಾಧಿಕ್**

ಪಿ.ಆರ್.888 ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು.

## ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ-ವಿಭಾಗ-2, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಐ.ಟಿ.ಐ ಆವರಣ, ಬೆಂಗಳೂರು-29.

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ: ಎಫ್‌ಸಿ:66:2004 ದಿನಾಂಕ: 6ನೇ ಮೇ 2005**

**ಅರ್ಜಿದಾರರು :**

1. ಆರ್. ಕಲ್ಪನಾ ಕೋಂ ಲೇಟ್ ಎಂ. ಅಶ್ವತಪ್ಪ
2. ಕು: ವಂದನಾ ಡಾ: ಆಫ್ ಲೇಟ್ ಎಂ. ಅಶ್ವತಪ್ಪ ಕೆ. ಆಫ್ ಕೆ. ಎನ್. ವೆಂಕಟಚಲಪತಿ, ಕರೇಕಲ್ಲಹಳ್ಳಿ ಗೌರಿಬಿದನೂರು, ಕೋಲಾರ ಜಿಲ್ಲೆ.

**ವಿರುದ್ಧ**

**ಪ್ರತಿವಾದಿಗಳು:**

1. ಎಕ್ಸಿಕ್ಯೂಟೀವ್ ಇಂಜಿನಿಯರ್, ಕರ್ನಾಟಕ ವಿದ್ಯುಚ್ಛಕ್ತಿ ಮಂಡಳಿ, (ಬೆಸ್ಕಾಮ್) ದೊಡ್ಡಬಳ್ಳಾಪುರ, ಬೆಂಗಳೂರು ಗ್ರಾಮಾಂತರ ಜಿಲ್ಲೆ.

**ಪ್ರಕಟಣೆ**

ಅರ್ಜಿದಾರರಾದ 1) ಆರ್. ಕಲ್ಪನಾ 2) ಕು: ವಂದನಾ ಇವರುಗಳು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, ದಿವಂಗತ ಎಂ. ಅಶ್ವತಪ್ಪ ಇವರು ಪ್ರತಿವಾದಿ ಇವರ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಅಪಘಾತ ಹೊಂದಿ ಮೃತಪಟ್ಟಿರುತ್ತಾರೆಂದು ತಿಳಿಸಿರುತ್ತಾರೆ. ಅಲ್ಲದೆ ತಾವು ಮೃತರ ಅವಲಂಬಿತರಾದ್ದರಿಂದ ತಮಗೆ ಕಾಯ್ದೆಯನ್ವಯ ಪರಿಹಾರದ ಹಣವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನದೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,

ಪಿ.ಆರ್.889 ಬೆಂಗಳೂರು ಉಪ-ವಿಭಾಗ-2, ಬೆಂಗಳೂರು.

## ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ-ವಿಭಾಗ-2, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಐ.ಟಿ.ಐ ಆವರಣ, ಬೆಂಗಳೂರು-29.

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ: ಎಫ್‌ಸಿ:22:2005 ದಿನಾಂಕ: 8ನೇ ಜೂನ್ 2005**

**ಅರ್ಜಿದಾರರು :**

1. ಹನುಮಕ್ಕ ಕೋಂ ಲೇಟ್ ನಾರಾಯಣ
2. ಮಾ: ಗಣೇಶ್ ಬಿನ್ ಲೇಟ್ ನಾರಾಯಣ
3. ಮುನಿನರಸಯ್ಯ ಬಿನ್ ದೊಡ್ಡನರಸಯ್ಯ
4. ಶ್ರೀಮತಿ ಹನುಮಕ್ಕ ಕೋಂ ದೊಡ್ಡನರಸಯ್ಯ, ಹರಲೀ ಮದಪಾಳ್ಯ, ಚಿಂಚಿಣ್ಣ ಕುಪ್ಪೆ ಅಂಚೆ, ಬೆಂಗಳೂರು ಸೌತ್ ತಾ:

**ವಿರುದ್ಧ**

**ಪ್ರತಿವಾದಿಗಳು:**

1. ಚಂದ್ರಶೇಖರ್ ಮೂರ್ತಿ, ಬಿನ್ ಕೆಂಪಯ್ಯ, ನಂ.101 ಕಾಮಾಕ್ಷಿಪಾಳ್ಯ, ಬೆಂಗಳೂರು
2. ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್, ಕಂ.ಲಿ., ನಂ.65, ಈಶ್ವರಿ ಕಂಪ್ಲೆಕ್ಸ್ ಡಾ: ರಾಜಕುಮಾರ್ ರಸ್ತೆ, ಬೆಂಗಳೂರು.

**ಪ್ರಕಟಣೆ**

ಅರ್ಜಿದಾರರಾದ ಹನುಮಕ್ಕ ಮತ್ತು ಇತರೆ 3 ಜನ ಇವರುಗಳು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, ದಿವಂಗತ ನಾರಾಯಣ ಇವರು ಪ್ರತಿವಾದಿ ಇವರ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಅಪಘಾತ ಹೊಂದಿ ಮೃತಪಟ್ಟಿರುತ್ತಾರೆಂದು ತಿಳಿಸಿರುತ್ತಾರೆ. ಅಲ್ಲದೆ ತಾವು ಮೃತರ ಅವಲಂಬಿತರಾದ್ದರಿಂದ ತಮಗೆ ಕಾಯ್ದೆಯನ್ವಯ ಪರಿಹಾರದ ಹಣವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನದೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಬೆಂಗಳೂರು ಉಪ-ವಿಭಾಗ-2, ಬೆಂಗಳೂರು.

ಪಿ.ಆರ್.890

**ಸಹಕಾರ ಸಂಘಗಳ ಜಂಟಿ ನಿಬಂಧಕರು (ನಿ.441) ದಾವಾ ಪಂಚಾಯ್ತಿ,**
**ಕರ್ನಾಟಕ ರಾಜ್ಯ ಸಹಕಾರ ಪಟ್ಟಣ ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು ಇವರ ನ್ಯಾಯಾಲಯದಲ್ಲಿ,**
**ನಂ. 132, 2ನೇ ಮಹಡಿ, ಕೆಂಗಲ್ ಹನುಮಂತಯ್ಯ ರಸ್ತೆ, ಬೆಂಗಳೂರು-560 027**
**ವ್ಯಾಜ್ಯ ಸಂಖ್ಯೆ: ಜೆಆರ್‌ಡಿ:ಯುಬಿಎಫ್-1444/2005-06**

**ಅರ್ಜಿದಾರರು :**

1. ಚಾರ್ಟರ್ಡ್ ಸಹಕಾರ ಬ್ಯಾಂಕ್ ಲಿ., ನಂ.1, 1ನೇ ಮೈನ್, 1ನೇ ಬ್ಲಾಕ್, ಕೋರಮಂಗಲ, ಬೆಂಗಳೂರು-34 ಇದರ ಮುಖ್ಯ ಕಾರ್ಯನಿರ್ವಾಹಣಾಧಿಕಾರಿಗಳು.

**ವಿರುದ್ಧ**

**ಎದುರು ಅರ್ಜಿದಾರರು:**

1. ಎಂ.ಎಸ್. ಸಿದ್ದಮ್ಮ ನಂಜುಂಡರೆಡ್ಡಿ ಎಜುಕೇಷನಲ್ ಟ್ರಸ್ಟ್, ನಂ.1178, 16ನೇ ಮೈನ್, 2ನೇ ಸ್ಟೇಜ್, ಬಿಟಿಎಂ ಲೇಔಟ್, ಬೆಂಗಳೂರು-76
2. ಡಾ: ಬಬಿತಾ, ಕೋಂ ಎನ್. ಜಯಪಾಲ್ ನಂ. 98, 5ನೇ ಕ್ರಾಸ್, 29ನೇ ಮೈನ್ ಬಿಟಿಎಂ ಲೇಔಟ್, ಬೆಂಗಳೂರು-76
3. ಎನ್. ಜಯಪಾಲ್, ಬಿನ್ ನಂಜುಂಡರೆಡ್ಡಿ ನಂ.98, 5ನೇ ಕ್ರಾಸ್, 29ನೇ ಮೈನ್, ಬಿಟಿಎಂ 2ನೇ ಸ್ಟೇಜ್, ಬೆಂಗಳೂರು-76
4. ಎನ್. ಸುಬ್ಬಾರೆಡ್ಡಿ, ಬಿನ್ ನಂಜರೆಡ್ಡಿ, ಹಿಂದಿನ ಆರ್. ಎ. ನಂ.189, 17ನೇ ಕ್ರಾಸ್, 10ನೇ ಮೈನ್, ಲಕ್ಕಸಂದ್ರ ಎಕ್ಸ್‌ಟೆನ್ಷನ್, ಬೆಂಗಳೂರು-30.

**1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರೀತ್ಯ ಚರಾಸ್ಥಿಯನ್ನು ತೀರ್ಪು ಪೂರ್ವ ಜಪ್ತಿ ಮಾಡಿರುವ ಬಗ್ಗೆ ನೋಟೀಸು**

1. ವಾದಿಯವರು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 70 ರನ್ವಯ ದಾಖಲಿಸಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಯಿಂದ ಒಟ್ಟು ರೂ.18,77,335.00 (ಹದಿನೆಂಟು ಲಕ್ಷ ಎಪ್ಪತ್ತೇಳು ಸಾವಿರದ ಮುನ್ನೂರ ಮೂವತ್ತೈದು) ಗಳನ್ನು ವ್ಯಾಜ್ಯ ದಿನಾಂಕದಿಂದ ಬೇಬಾಕಿಯಾಗಿ ಪಾವತಿಯಾಗುವ ದಿನಾಂಕದವರೆಗೆ ಶೇಕಡಾ 18ರ ದರದಂತೆ ಆಗುವ ಬಡ್ಡಿ ಹಾಗೂ ಕೋರ್ಟ್ ಖರ್ಚಿನೊಂದಿಗೆ ಪ್ರತಿವಾದಿಯ ಚರ ಮತ್ತು ಸ್ಥಿರ ಆಸ್ತಿಗಳನ್ನು ಮಾರಾಟ ಮಾಡಿ ವಸೂಲು ಮಾಡಿಸಲು ಆದೇಶ ನೀಡಬೇಕೆಂದು ದಾವಾ ಅರ್ಜಿಯಲ್ಲಿ ಕೋರಿರುತ್ತಾರೆ.
2. 2ನೇ ಪ್ರತಿವಾದಿಯು 1ನೇ ಪ್ರತಿವಾದಿಯ ಟ್ರಸ್ಟನ್ನು ಪ್ರತಿನಿಧಿಸಿ ಸಾಲ ಪಡೆದಿದ್ದು, 3 ಮತ್ತು 4ನೇ ಪ್ರತಿವಾದಿಯವರುಗಳು ಜಾಮೀನುದಾರರಾಗಿರುತ್ತಾರೆಂದು ವಾದಿಯು ವ್ಯಾಜ್ಯದ ಅರ್ಜಿಯಲ್ಲಿ ತಿಳಿಸಿರುತ್ತಾರೆ.
3. ವಾದಿಯು ಈ ದಾವಾ ಅರ್ಜಿಯೊಂದಿಗೆ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರನ್ವಯ ಅರ್ಜಿಯನ್ನು ಸಲ್ಲಿಸಿ 2, 3 ಮತ್ತು 4ನೇ ಪ್ರತಿವಾದಿಗಳ ಹೆಸರಿನಲ್ಲಿರುವ ಈ ಕೆಳಗೆ ಶೆಡ್ಯೂಲಿನಲ್ಲಿ ನಮೂದಿಸಿರುವ ಸ್ಥಿರ ಆಸ್ತಿಯನ್ನು ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ಪೂರ್ವ ಜಪ್ತಿ ಮಾಡಿ (Attachment Before Judgment) ಆದೇಶ ನೀಡುವಂತೆ ಕೋರಿರುತ್ತಾರೆ. ಶೆಡ್ಯೂಲಿನಲ್ಲಿ ಕಾಣಿಸಿರುವ ಸ್ವತ್ತನ್ನು ಸದರಿಯವರು ವಾದಿ ಬ್ಯಾಂಕಿಗೆ ವಂಚನೆ ಮಾಡುವ ದುರುದ್ದೇಶದಿಂದ ಮಾರಾಟ/ ಪರಭಾರೆ ಮಾಡಲು ಉದ್ದೇಶಿಸಿದ್ದು, ಇದನ್ನು ತಡೆಯದಿದ್ದಲ್ಲಿ ವಾದಿಯು ಪ್ರತಿವಾದಿಗಳ ವಿರುದ್ಧ ದಾಖಲಿಸಿರುವ ದಾವಾ ಅರ್ಜಿಯಲ್ಲಿ ಈ ನ್ಯಾಯಾಲಯವು ಅವಾರ್ಡ್ ಅಥವಾ ಡಿಕ್ರಿ ನೀಡಿದರೂ ಸದರಿ ಅವಾರ್ಡ್/ ಡಿಕ್ರಿ ಅನ್ವಯ ಪ್ರತಿವಾದಿಗಳಿಂದ ವಾದಿಗೆ ಬರಬೇಕಾದ ಮೊಬಲಗನ್ನು ಪ್ರತಿವಾದಿಗಳಿಂದ ವಸೂಲಿ ಮಾಡಲು ಯಾವುದೇ ರಹವಿಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದು ವಾದಿಯವರು ಈ ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ.
4. ವಾದಿಯ ದಾವಾ ಅರ್ಜಿ ಹಾಗೂ ಕಲಂ 103 ರನ್ವಯ ಸಲ್ಲಿಸಿರುವ ಅರ್ಜಿಗಳನ್ನು ಪರಿಶೀಲಿಸಲಾಗಿ ವಾದಿಯು ಕಲಂ 103ರ ಅರ್ಜಿಯಲ್ಲಿ ನಮೂದಿಸಿರುವ ಅಂಶಗಳು ನಿಜವೆಂದು ಕಂಡು ಬರುತ್ತದೆ. 2, 3 ಮತ್ತು 4ನೇ ಪ್ರತಿವಾದಿಗಳ ಹೆಸರಿನಲ್ಲಿರುವ ಈ ಕೆಳಗೆ ಶೆಡ್ಯೂಲಿನಲ್ಲಿ ಕಾಣಿಸಿರುವ ಸ್ಥಿರ ಸ್ವತ್ತನ್ನು ಮಾರಾಟ ಮಾಡದಂತೆ ಹಾಗೂ ಪರಭಾರೆ ಮಾಡದಂತೆ ತಡೆಯದೇ ಇದ್ದಲ್ಲಿ ಈ ದಾವೆಯಲ್ಲಿ ನೀಡಲಿರುವ ಅವಾರ್ಡ್/ ಡಿಕ್ರಿಯನ್ನು ವಾದಿಯು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಲಿದೆ ಎಂಬ ಅಂಶವು ಈ ನ್ಯಾಯಾಲಯಕ್ಕೆ ಮನವರಿಕೆಯಾಗಿರುತ್ತದೆ.
5. ಮೇಲೆ ನಮೂದಿಸಿರುವ ಪರಿಸ್ಥಿತಿಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಮತ್ತು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಕ್ರಮ ಸಂಖ್ಯೆ ಸಿಎಂಡಬ್ಲ್ಯೂ 191 ಸಿಎಲ್ಎಂ 2004 (ಭಾಗ-1) ದಿನಾಂಕ: 02.02.2005 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಆರ್. ಎಂ. ನಟರಾಜ್ ಸಹಕಾರ ಸಂಘಗಳ ಜಂಟಿ ನಿಬಂಧಕರು (ನಿ.441) ದಾವಾ ಪಂಚಾಯ್ತಿ ನ್ಯಾಯಾಲಯ, ಕರ್ನಾಟಕ ರಾಜ್ಯ ಸಹಕಾರ ಪಟ್ಟಣ ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು ಆದ ನಾನು 2, 3 ಮತ್ತು 4ನೇ ಪ್ರತಿವಾದಿಗಳ ಹೆಸರಿನಲ್ಲಿರುವ ಈ ಕೆಳಗೆ ಶೆಡ್ಯೂಲಿನಲ್ಲಿ ಕಾಣಿಸಿರುವ ಸ್ಥಿರ ಆಸ್ತಿಯನ್ನು ಈ ಕೆಳಕಂಡ ಷರತ್ತಿಗೊಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

2, 3 ಮತ್ತು 4ನೇ ಪ್ರತಿವಾದಿಗಳು ಒಂದು ವೇಳೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ಒಟ್ಟು ರೂ.18,78,000.00 (ಹದಿನೆಂಟು ಲಕ್ಷ ಎಪ್ಪತ್ತೆಂಟು ಸಾವಿರ) ಗಳನ್ನು ವ್ಯಾಜ್ಯ ದಿನಾಂಕದಿಂದ ಸಾಲ ಪೂರ್ತಿ ಪಾವತಿಯಾಗುವ ದಿನಾಂಕದವರೆಗೆ ಶೇಕಡಾ 18ರ ದರದಂತೆ ಆಗುವ ಬಡ್ಡಿ ಹಾಗೂ ಇತರೆ ಖರ್ಚಿನೊಂದಿಗೆ ವಾದಿಯ ಬ್ಯಾಂಕಿನಲ್ಲಿ ಅಮಾನತ್ತು ಖಾತೆಗೆ ದಿನಾಂಕ: 20.07.2005ರ ಒಳಗಾಗಿ ಜಮಾಮಾಡಿ, ಹೀಗೆ ಜಮಾಮಾಡಿದ ಅಧಿಕೃತ ಚಲನ್/ ರಸೀದಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ 2, 3 ಮತ್ತು 4ನೇ ಪ್ರತಿವಾದಿಗಳಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಯು ಮೇಲೆ ತಿಳಿಸಿದಂತೆ ನಿಗದಿತ ದಿನಾಂಕದೊಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೊಳಪಟ್ಟು ನೀಡಲಾಗಿರುವ ಈ ತೀರ್ಪು ಪೂರ್ವ ಜಪ್ತಿ ಆದೇಶವನ್ನು ಸ್ಥಿರೀಕರಿಸಲಾಗುವುದು.

ಈ ಕೆಳಗಿನ ಶೆಡ್ಯೂಲಿನಲ್ಲಿ ನಮೂದಿಸಿರುವ ಚರ ಮತ್ತು ಸ್ಥಿರ ಆಸ್ಥಿಯನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸು ನೀಡಲಾಗಿದ್ದು, ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಗಳು ಈ ತೀರ್ಪು ಪೂರ್ವ ಜಪ್ತಿ ಆದೇಶಕ್ಕೆ ಒಳಪಡುತ್ತವೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

**ಶೆಡ್ಯೂಲ್ ಸ್ಥಿರಾಸ್ತಿಯ ವಿವರ**

**ಐಟಂ ನಂ.1**

ಆನೇಕಲ್ ತಾಲ್ಲೂಕಿನ ಅತ್ತಿಬೆಲೆ ಹೋಬಳಿಯ ಕಿತಿಗಾನಹಳ್ಳಿ ಗ್ರಾಮದ ಸರ್ವೆ ನಂ. 59ರ 10 ಗುಂಟೆ ಸ್ವತ್ತು. ಇದರ ಚಕ್ಕುಬಂದಿ.

**ಪೂರ್ವಕ್ಕೆ** : ಸರ್ವೆ ನಂ.59ರ ಉಳಿಕೆ ಜಮೀನು
**ಪಶ್ಚಿಮಕ್ಕೆ** : ಸರ್ವೆ ನಂ. 59ರ ಉಳಿಕೆ ಜಮೀನು
**ಉತ್ತರಕ್ಕೆ** : ಹುಚ್ಚಪ್ಪನವರ ಜಮೀನು
**ದಕ್ಷಿಣಕ್ಕೆ** : ಮುನಿಸ್ವಾಮಪ್ಪನವರ ಜಮೀನು

**ಐಟಂ ನಂ.2**

ಬೆಂಗಳೂರಿನ ಯೂಕೋ ಬ್ಯಾಂಕ್ ಲೇಔಟಿನ 1ನೇ ಹಂತ, ಬಿಟಿಎಂ. ಲೇಔಟ್ 20ನೇ ಮುಖ್ಯ ರಸ್ತೆ, 3ನೇ ಕ್ರಾಸ್‌ನಲ್ಲಿರುವ ಸ್ವತ್ತಿನ ಸಂಖ್ಯೆ: 146 ಮತ್ತು 147 ಅಳತೆ: 40X60 ಅಡಿ ಇದರ ಚಕ್ಕುಬಂದಿ.

**ಪೂರ್ವಕ್ಕೆ** : ರಸ್ತೆ
**ಪಶ್ಚಿಮಕ್ಕೆ** : ನಿವೇಶನ ಸಂಖ್ಯೆ 95 ಮತ್ತು 96
**ಉತ್ತರಕ್ಕೆ** : ನಿವೇಶನ ಸಂಖ್ಯೆ 51
**ದಕ್ಷಿಣಕ್ಕೆ** : ನಿವೇಶನ ಸಂಖ್ಯೆ 145

**ಐಟಂ ನಂ.3**

ಬೆಂಗಳೂರು ಬಿಟಿಎಂ 2ನೇ ಹಂತ 29ನೇ ಮುಖ್ಯ ರಸ್ತೆ, 5ನೇ ಅಡ್ಡ ರಸ್ತೆಯಲ್ಲಿರುವ ಸ್ವತ್ತು ಸಂಖ್ಯೆ 98

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ನ್ಯಾಯಾಲಯದ ಮುದ್ರೆಯೊಂದಿಗೆ ದಿನಾಂಕ: 18.06.2005 ರಂದು ನೀಡಿರುತ್ತೇನೆ.

ಸಹಕಾರ ಸಂಘಗಳ ಜಂಟಿ ನಿಬಂಧಕರು (ನಿ.441),
ದಾವಾ ಪಂಚಾಯ್ತಿ ನ್ಯಾಯಾಲಯ,
ಕ.ರಾ.ಸ.ಪ. ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು.

ಪಿ.ಆರ್.891

**ಸಹಕಾರ ಸಂಘಗಳ ಜಂಟಿ ನಿಬಂಧಕರು (ನಿ.441) ದಾವಾ ಪಂಚಾಯ್ತಿ,**
**ಕರ್ನಾಟಕ ರಾಜ್ಯ ಸಹಕಾರ ಪಟ್ಟಣ ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು ಇವರ ನ್ಯಾಯಾಲಯದಲ್ಲಿ,**
**ನಂ. 132, 2ನೇ ಮಹಡಿ, ಕೆಂಗಲ್ ಹನುಮಂತಯ್ಯ ರಸ್ತೆ, ಬೆಂಗಳೂರು-560 027**
**ವ್ಯಾಜ್ಯ ಸಂಖ್ಯೆ: ಜೆಆರ್‌ಡಿ:ಯುಬಿಎಫ್-1443/2005-06**

| ಅರ್ಜಿದಾರರು : | ವಿರುದ್ಧ | ಎದುರು ಅರ್ಜಿದಾರರು: |
|---|---|---|
| 1. ಚಾರ್ಟಾರ್ಡ್ ಸಹಕಾರ ಬ್ಯಾಂಕ್ ಲಿ., ನಂ.1, 1ನೇ ಮೈನ್, 1ನೇ ಬ್ಲಾಕ್, ಕೋರಮಂಗಲ, ಬೆಂಗಳೂರು-34 ಇದರ ಮುಖ್ಯ ಕಾರ್ಯನಿರ್ವಾಹಣಾಧಿಕಾರಿಗಳು. | | 1. ಎಂ. ಎಸ್. ಗಾರ್ಡನ್ಸ್ ಇನ್ಫೋರ್ಮೇಶನ್ ಟೆಕ್ನಾಲಜಿ ನಂ. 1178, 16ನೇ ಮೈನ್, 2ನೇ ಸ್ಟೇಜ್, ಬಿಟಿಎಂ ಲೇಔಟ್, ಬೆಂಗಳೂರು-560 076 |
| | | 2. ಡಾ: ಬಬಿತಾ, ಕೋಂ ಎನ್. ಜಯಪಾಲ್ ನಂ.98, 5ನೇ ಕ್ರಾಸ್, 29ನೇ ಮೈನ್ ಬಿಟಿಎಂ ಲೇಔಟ್, ಬೆಂಗಳೂರು-76 |
| | | 3. ಎನ್. ಜಯಪಾಲ್ ಬಿನ್ ನಂಜುಂಡರೆಡ್ಡಿ ನಂ.98, 5ನೇ ಕ್ರಾಸ್, 29ನೇ ಮೈನ್, ಬಿಟಿಎಂ 2ನೇ ಸ್ಟೇಜ್, ಬೆಂಗಳೂರು-76 |
| | | 4. ಕೆ.ಆರ್. ರಾಜಶೇಖರ್ ರೆಡ್ಡಿ, ಬಿನ್ ರಾಮರೆಡ್ಡಿ, ಕೈಕೊಂಡರಳ್ಳಿ, ಕಾರ್ಮೆಲರಮ್ ಪೋಸ್ಟ್, ಸರ್ಜಾಪುರ ರಸ್ತೆ, ಬೆಂಗಳೂರು-35 |

**1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರೀತ್ಯ ಚರಾಸ್ಥಿಯನ್ನು ತೀರ್ಪು ಪೂರ್ವ ಜಪ್ತಿ ಮಾಡಿರುವ ಬಗ್ಗೆ ನೋಟೀಸು**

1. ವಾದಿಯವರು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 70 ರನ್ವಯ ದಾಖಲಿಸಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಯಿಂದ ಒಟ್ಟು ರೂ.22,15,717.00 (ಇಪ್ಪತ್ತೆರಡು ಲಕ್ಷ ಹದಿನೈದು ಸಾವಿರದ ಏಳುನೂರಾ ಹದಿನೇಳು) ಗಳನ್ನು ವ್ಯಾಜ್ಯ ದಿನಾಂಕದಿಂದ ಬೇಬಾಕಿಯಾಗಿ ಪಾವತಿಯಾಗುವ ದಿನಾಂಕದವರೆಗೆ ಶೇಕಡಾ 18ರ ದರದಂತೆ ಆಗುವ ಬಡ್ಡಿ ಹಾಗೂ ಕೋರ್ಟ್ ಖರ್ಚಿನೊಂದಿಗೆ ಪ್ರತಿವಾದಿಯ ಚರ ಮತ್ತು ಸ್ಥಿರ ಆಸ್ತಿಗಳನ್ನು ಮಾರಾಟ ಮಾಡಿ ವಸೂಲು ಮಾಡಿಸಲು ಆದೇಶ ನೀಡಬೇಕೆಂದು ದಾವಾ ಅರ್ಜಿಯಲ್ಲಿ ಕೋರಿರುತ್ತಾರೆ.
2. 2ನೇ ಪ್ರತಿವಾದಿಯು 1ನೇ ಪ್ರತಿವಾದಿ ಸಂಸ್ಥೆಯ ಮಾಲೀಕರಾಗಿದ್ದು, ವಾದಿ ಬ್ಯಾಂಕಿನಿಂದ ರೂ.15.00 ಲಕ್ಷಗಳ ಸಾಲವನ್ನು ಪಡೆದಿದ್ದು, ಈ ಸಾಲಕ್ಕೆ 3 ಮತ್ತು 4ನೇ ಪ್ರತಿವಾದಿಯವರುಗಳು ಜಾಮೀನುದಾರರಾಗಿರುತ್ತಾರೆಂದು ವಾದಿಯು ವ್ಯಾಜ್ಯದ ಅರ್ಜಿಯಲ್ಲಿ ತಿಳಿಸಿರುತ್ತಾರೆ.
3. ವಾದಿಯು ಈ ದಾವಾ ಅರ್ಜಿಯೊಂದಿಗೆ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರನ್ವಯ ಅರ್ಜಿಯನ್ನು ಸಲ್ಲಿಸಿ 2, 3 ಮತ್ತು 4ನೇ ಪ್ರತಿವಾದಿಗಳ ಹೆಸರಿನಲ್ಲಿರುವ ಈ ಕೆಳಗೆ ಶೆಡ್ಯೂಲಿನಲ್ಲಿ ನಮೂದಿಸಿರುವ ಸ್ಥಿರ ಆಸ್ತಿಯನ್ನು ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ಪೂರ್ವ ಜಪ್ತಿ ಮಾಡಿ (Attachment Before Judgment) ಆದೇಶ ನೀಡುವಂತೆ ಕೋರಿರುತ್ತಾರೆ. ಶೆಡ್ಯೂಲಿನಲ್ಲಿ ಕಾಣಿಸಿರುವ ಸ್ವತ್ತನ್ನು ಸದರಿಯವರು ವಾದಿ ಬ್ಯಾಂಕಿಗೆ ವಂಚನೆ ಮಾಡುವ ದುರುದ್ದೇಶದಿಂದ ಮಾರಾಟ/ ಪರಭಾರೆ ಮಾಡಲು ಉದ್ದೇಶಿಸಿದ್ದು, ಇದನ್ನು ತಡೆಯದಿದ್ದಲ್ಲಿ ವಾದಿಯು ಪ್ರತಿವಾದಿಗಳ ವಿರುದ್ದ ದಾಖಲಿಸಿರುವ ದಾವಾ ಅರ್ಜಿಯಲ್ಲಿ ಈ ನ್ಯಾಯಾಲಯವು ಅವಾರ್ಡ್ ಅಥವಾ ಡಿಕ್ರಿ ನೀಡಿದರೂ ಸದರಿ ಅವಾರ್ಡ್/ ಡಿಕ್ರಿ ಅನ್ವಯ ಪ್ರತಿವಾದಿಗಳಿಂದ ವಾದಿಗೆ ಬರಬೇಕಾದ ಮೊಬಲಗನ್ನು ಪ್ರತಿವಾದಿಗಳಿಂದ ವಸೂಲಿ ಮಾಡಲು ಯಾವುದೇ ರಹವಿಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದು ವಾದಿಯವರು ಈ ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ.
4. ವಾದಿಯ ದಾವಾ ಅರ್ಜಿ ಹಾಗೂ ಕಲಂ 103 ರನ್ವಯ ಸಲ್ಲಿಸಿರುವ ಅರ್ಜಿಗಳನ್ನು ಪರಿಶೀಲಿಸಲಾಗಿ ವಾದಿಯು ಕಲಂ 103ರ ಅರ್ಜಿಯಲ್ಲಿ ನಮೂದಿಸಿರುವ ಅಂಶಗಳು ನಿಜವೆಂದು ಕಂಡು ಬರುತ್ತದೆ. 2, 3 ಮತ್ತು 4ನೇ ಪ್ರತಿವಾದಿಗಳ ಹೆಸರಿನಲ್ಲಿರುವ ಈ ಕೆಳಗೆ ಶೆಡ್ಯೂಲಿನಲ್ಲಿ ಕಾಣಿಸಿರುವ ಸ್ಥಿರ ಸ್ವತ್ತನ್ನು ಮಾರಾಟ ಮಾಡದಂತೆ ಹಾಗೂ ಪರಭಾರೆ ಮಾಡದಂತೆ ತಡೆಯದೇ ಇದ್ದಲ್ಲಿ ಈ ದಾವೆಯಲ್ಲಿ ನೀಡಲಿರುವ ಅವಾರ್ಡ್/ ಡಿಕ್ರಿಯನ್ನು ವಾದಿಯು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಲಿದೆ ಎಂಬ ಅಂಶವು ಈ ನ್ಯಾಯಾಲಯಕ್ಕೆ ಮನವರಿಕೆಯಾಗಿರುತ್ತದೆ.
5. ಮೇಲೆ ನಮೂದಿಸಿರುವ ಪರಿಸ್ಥಿತಿಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಮತ್ತು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಕ್ರಮ ಸಂಖ್ಯೆ ಸಿಎಂಡಬ್ಲ್ಯೂ 191 ಸಿಎಲ್ಎಂ 2004 (ಭಾಗ-1) ದಿನಾಂಕ: 02.02.2005 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಆರ್. ಎಂ. ನಟರಾಜ್ ಸಹಕಾರ ಸಂಘಗಳ ಜಂಟಿ ನಿಬಂಧಕರು (ನಿ.441) ದಾವಾ ಪಂಚಾಯ್ತಿ ನ್ಯಾಯಾಲಯ, ಕರ್ನಾಟಕ ರಾಜ್ಯ ಸಹಕಾರ ಪಟ್ಟಣ ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು ಆದ ನಾನು 2, 3 ಮತ್ತು 4ನೇ ಪ್ರತಿವಾದಿಗಳ ಹೆಸರಿನಲ್ಲಿರುವ ಈ ಕೆಳಗೆ ಶೆಡ್ಯೂಲಿನಲ್ಲಿ ಕಾಣಿಸಿರುವ ಸ್ಥಿರ ಆಸ್ತಿಯನ್ನು ಈ ಕೆಳಕಂಡ ಷರತ್ತಿಗೊಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

2, 3 ಮತ್ತು 4ನೇ ಪ್ರತಿವಾದಿಗಳು ಒಂದು ವೇಳೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ಒಟ್ಟು ರೂ.22,16,000 (ಇಪ್ಪತ್ತೆರಡು ಲಕ್ಷದ ಹದಿನಾರು ಸಾವಿರ) ಗಳನ್ನು ವ್ಯಾಜ್ಯ ದಿನಾಂಕದಿಂದ ಸಾಲ ಪೂರ್ತಿ ಪಾವತಿಯಾಗುವ ದಿನಾಂಕದವರೆಗೆ ಶೇಕಡಾ 18ರ ದರದಂತೆ ಆಗುವ ಬಡ್ಡಿ ಹಾಗೂ ಇತರೆ ಖರ್ಚಿನೊಂದಿಗೆ ವಾದಿಯ ಬ್ಯಾಂಕಿನಲ್ಲಿ ಅಮಾನತ್ತು ಖಾತೆಗೆ ದಿನಾಂಕ: 20.07.2005ರ ಒಳಗಾಗಿ ಜಮಾಮಾಡಿ, ಹೀಗೆ ಜಮಾಮಾಡಿದ ಅಧಿಕೃತ ಚಲನ್/ ರಸೀದಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ 2, 3 ಮತ್ತು 4ನೇ ಪ್ರತಿವಾದಿಗಳಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಯು ಮೇಲೆ ತಿಳಿಸಿದಂತೆ ನಿಗದಿತ ದಿನಾಂಕದೊಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೊಳಪಟ್ಟು ನೀಡಲಾಗಿರುವ ಈ ತೀರ್ಪು ಪೂರ್ವ ಜಪ್ತಿ ಆದೇಶವನ್ನು ಸ್ಥಿರೀಕರಿಸಲಾಗುವುದು.

ಈ ಕೆಳಗಿನ ಶೆಡ್ಯೂಲಿನಲ್ಲಿ ನಮೂದಿಸಿರುವ ಚರ ಮತ್ತು ಸ್ಥಿರ ಆಸ್ಥಿಯನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸು ನೀಡಲಾಗಿದ್ದು, ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಗಳು ಈ ತೀರ್ಪು ಪೂರ್ವ ಜಪ್ತಿ ಆದೇಶಕ್ಕೆ ಒಳಪಡುತ್ತವೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

**ಶೆಡ್ಯೂಲ್ ಸ್ಥಿರಾಸ್ತಿಯ ವಿವರ**

**ಐಟಂ ನಂ.1**

ಬೆಂಗಳೂರು ದಕ್ಷಿಣ ತಾಲ್ಲೂಕಿನ ಹುಳಿಮಾವು ಗ್ರೂಪ್ ಪಂಚಾಯ್ತಿ, ಬೇಗೂರು ಹೋಬಳಿಯ ಅರಕೆರೆ ಗ್ರಾಮದಲ್ಲಿರುವ ಗ್ರಾಮಠಾಣಾ ಹೌಸ್ ಲಿಸ್ಟ್ ಖಾತೆ ಸಂಖ್ಯೆ: 665/3, 544/2, ಅಳತೆ ಪೂರ್ವ-ಪಶ್ಚಿಮ: 30 ಅಡಿ, ಉತ್ತರ-ದಕ್ಷಿಣ: 80 ಅಡಿಯುಳ್ಳ ನಿವೇಶನ ಸಂಖ್ಯೆ 13 ಮತ್ತು 14. ಇದರ ಚಕ್ಕುಬಂದಿ

**ಪೂರ್ವಕ್ಕೆ** : ರಸ್ತೆ
**ಪಶ್ಚಿಮಕ್ಕೆ** : 15 ಮತ್ತು 16 ಸಂಖ್ಯೆಯ ಸ್ವತ್ತು
**ಉತ್ತರಕ್ಕೆ** : ರಸ್ತೆ ಮತ್ತು ಖಾಸಗಿ ಸ್ವತ್ತು
**ದಕ್ಷಿಣಕ್ಕೆ** : ಖಾಸಗಿ ಸ್ವತ್ತು

**ಐಟಂ ನಂ.2**

ಬೆಂಗಳೂರು ದಕ್ಷಿಣ ತಾಲ್ಲೂಕಿನ ವರ್ತೂರು ಹೋಬಳಿಯ ಕೈಕೊಂಡನಹಳ್ಳಿಯಲ್ಲಿರುವ ಹಳೇ ಖಾನೆಸುಮಾರಿ ಸಂಖ್ಯೆ: 31, ಹಳೆ ಹೌಸ್ ಲಿಸ್ಟ್ ಸಂಖ್ಯೆ 35, ಹೊಸ ಖಾತೆ ಸಂಖ್ಯೆ: 52, ಹೊಸ ಸ್ವತ್ತು ಸಂಖ್ಯೆ: 55/ಎ ರ 36 86 ಅಡಿ ಅಳತೆಯುಳ್ಳ ಸ್ವತ್ತು. ಇದರ ಚಕ್ಕುಬಂದಿ.

**ಪೂರ್ವಕ್ಕೆ** : ಸರ್ಕಾರಿ ಜಮೀನು
**ಪಶ್ಚಿಮಕ್ಕೆ** : ಸರ್ಕಾರಿ ಜಮೀನು
**ಉತ್ತರಕ್ಕೆ** : ರಸ್ತೆ
**ದಕ್ಷಿಣಕ್ಕೆ** : ಆದಿ ಕರ್ನಾಟಕರವರ ಮನೆಗಳು

**ಐಟಂ ನಂ.3**

ಬೆಂಗಳೂರು ಬಿಟಿಎಂ 2ನೇ ಹಂತ 29ನೇ ಮುಖ್ಯ ರಸ್ತೆ, 5ನೇ ಅಡ್ಡ ರಸ್ತೆಯಲ್ಲಿರುವ ಸ್ವತ್ತು ಸಂಖ್ಯೆ 98

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ನ್ಯಾಯಾಲಯದ ಮುದ್ರೆಯೊಂದಿಗೆ ದಿನಾಂಕ: 18.06.2005 ರಂದು ನೀಡಿರುತ್ತೇನೆ.

ಸಹಕಾರ ಸಂಘಗಳ ಜಂಟಿ ನಿಬಂಧಕರು (ನಿ.441),
ದಾವಾ ಪಂಚಾಯ್ತಿ ನ್ಯಾಯಾಲಯ,
ಕ.ರಾ.ಸ.ಪ. ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು.

ಪಿ.ಆರ್.892

## ಪೊಲೀಸ್ ಕಮೀಷನರ್ ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ

**ಅಧಿಸೂಚನೆ**

**ಸಂಖ್ಯೆ: 14:ಸಂವಿ:ಸಿಓಪಿ:2005 ದಿನಾಂಕ: 28ನೇ ಏಪ್ರಿಲ್, 2005**

ಬೆಂಗಳೂರು ನಗರ ವ್ಯಾಪ್ತಿಯ ಕಮರ್ಷಿಯಲ್‌ಸ್ಟ್ರೀಟ್ ರಸ್ತೆಯಲ್ಲಿ ಶುಲ್ಕ ಪಡೆದು ವಾಹನ ನಿಲುಗಡೆ ಪದ್ಧತಿಯನ್ನು ಸ್ಥಳೀಯ ವ್ಯಾಪಾರಸ್ಥರ ಸಹಭಾಗಿತ್ವದೊಂದಿಗೆ ಬೆಂಗಳೂರು ಮಹಾನಗರ ಪಾಲಿಕೆ ಆರಂಭಿಸಿದೆ. ಈ ವ್ಯವಸ್ಥೆಯಲ್ಲಿ ಆಧುನಿಕ ತಂತ್ರಜ್ಞಾನವನ್ನು ಬಳಸಿ ನಿಲುಗಡೆ ಮೀಟರ್‌ಗಳನ್ನು ಸ್ಥಾಪಿಸಿ, ಶುಲ್ಕ ವಿಧಿಸಿ ನಿಗದಿತ ಅವಧಿಗಾಗಿ ವಾಹನ ನಿಲುಗಡೆಗೆ ಅವಕಾಶ ಕಲ್ಪಿಸುವ ನಿಟ್ಟಿನಲ್ಲಿ ಬೆಂಗಳೂರು ಮಹಾನಗರ ಪಾಲಿಕೆಯ ಕೋರಿಕೆಯಂತೆ ವಾಹನಗಳ ನಿಲುಗಡೆಗೆ ಕಾಲಾವಧಿ ಹಾಗೂ ನಿಯಮ ಉಲ್ಲಂಘನೆ ಮಾಡಿದ ವಾಹನಗಳನ್ನು ಎಳೆದೊಯ್ಯುವ ಹಾಗೂ ದಂಡ ವಸೂಲಿ ಮಾಡುವ ಬಗ್ಗೆ ರೂಪುರೇಷೆಗಳನ್ನು ಮಾಡುವುದು ಅವಶ್ಯಕವಾಗಿರುತ್ತೆ.

ಕಮರ್ಷಿಯಲ್‌ಸ್ಟ್ರೀಟ್ ರಸ್ತೆಯಲ್ಲಿ ವಾಹನ ಸಂಚಾರ ದಟ್ಟಣೆ ಹೆಚ್ಚಿಗೆ ಇದ್ದು ಅಲ್ಲದೆ ಇಲ್ಲಿಗೆ ನಗರ ವಾಸಿಗಳು ಹಾಗೂ ಪ್ರವಾಸಿಗರು ಹೆಚ್ಚಿಗೆ ಭೇಟಿ ನೀಡುವ ಪ್ರಯುಕ್ತ ಇವರುಗಳು ಬರುವ ವಾಹನಗಳು ಹೆಚ್ಚಿನ ಸಮಯ ಕಮರ್ಷಿಯಲ್‌ಸ್ಟ್ರೀಟ್ ರಸ್ತೆಯಲ್ಲಿ ನಿಲುಗಡೆಗೊಂಡಲ್ಲಿ ಇನ್ನಿತರೆ ವಾಹನಗಳು ನಿಲುಗಡೆಯ ಸೌಲಭ್ಯದಿಂದ ವಂಚಿತವಾಗುತ್ತವೆ. ಆದ್ದರಿಂದ ಪ್ರವಾಸಿಗರ ಹಾಗೂ ನಗರವಾಸಿಗಳ ವಾಹನಗಳಿಗೆ ಕಮರ್ಷಿಯಲ್‌ಸ್ಟ್ರೀಟ್ ರಸ್ತೆಯಲ್ಲಿ ನಿಲುಗಡೆಯ ಸಮತೋಲನವನ್ನು ಸರಿತೂಗಿಸಲು ಹಾಗೂ ಸಂಚಾರಕ್ಕೆ ಯಾವುದೇ ಅಡಚಣೆಯಾಗದಂತೆ ವಾಹನಗಳ ನಿಲುಗಡೆಗೆ ಸಂಬಂಧಿಸಿದಂತೆ ಕಾಲಾವಧಿಯನ್ನು ನಿಗದಿಪಡಿಸುವುದು ಹಾಗೂ ನಿಗದಿಪಡಿಸಿದ ಅವಧಿಗಿಂತ ವಾಹನಗಳು ಹೆಚ್ಚಿನ ಸಮಯ ನಿಲುಗಡೆಯಾಗಿ ನಿಯಮ ಉಲ್ಲಂಘನೆ ಮಾಡಿದಲ್ಲಿ ವಾಹನ ಮಾಲೀಕರ ವಿರುದ್ಧ ದಂಡ ವಿಧಿಸುವುದು ಅವಶ್ಯಕವಾಗಿರುತ್ತೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನ್ನ ಅಧಿಕಾರ ವ್ಯಾಪ್ತಿಯಲ್ಲಿರುವ ಅಧಿಕಾರವನ್ನು ಚಲಾಯಿಸಿ ಎಸ್. ಮರಿಸ್ವಾಮಿ, ಐ.ಪಿ.ಎಸ್., ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಕಮರ್ಷಿಯಲ್‌ಸ್ಟ್ರೀಟ್ ರಸ್ತೆಯಲ್ಲಿ ವಾಹನ ನಿಲುಗಡೆಗೆ ಸಂಬಂಧಿಸಿದಂತೆ ಈ ಕೆಳಕಂಡಂತೆ ಆದೇಶಿಸಿರುತ್ತೇನೆ.

1. ಕಮರ್ಷಿಯಲ್‌ಸ್ಟ್ರೀಟ್ ರಸ್ತೆಯಲ್ಲಿ ಕಾಮರಾಜ ರಸ್ತೆ-ಕಮರ್ಷಿಯಲ್‌ಸ್ಟ್ರೀಟ್ ಜಂಕ್ಷನ್‌ನಿಂದ ಓ.ಪಿ.ಹೆಚ್ ರಸ್ತೆ-ಕಮರ್ಷಿಯಲ್‌ಸ್ಟ್ರೀಟ್ ಜಂಕ್ಷನ್‌ವರೆಗೂ ರಸ್ತೆಯಲ್ಲಿ ಮಾತ್ರ (ಸ್ಥಳದಲ್ಲಿ ರಸ್ತೆಯ ಮೇಲೆ ಗುರುತಿಸಿರುವ ರೀತ್ಯ) "ಲಘು ಮೋಟಾರ್ ವಾಹನಗಳನ್ನು" ನಿಲುಗಡೆ ಮಾಡಲು, ಮೋಟಾರ್ ವಾಹನ ಕಾಯ್ದೆ ಕಲಂ 117ರ ಅಡಿಯಲ್ಲಿ ನಿಲುಗಡೆಯ ಕಾಲಾವಧಿಯನ್ನು ನಿಗದಿಪಡಿಸಿ ಒಂದು ವಾಹನವು ಗರಿಷ್ಠ 2 ಗಂಟೆಗಳ ಅವಧಿಯವರೆಗೂ ಮಹಾನಗರ ಪಾಲಿಕೆ ನಿಗದಿಪಡಿಸಿರುವ ಶುಲ್ಕ ನೀಡಿ ನಿಲುಗಡೆ ಮಾಡಬಹುದಾಗಿರುತ್ತದೆ.
2. ಮೋಟಾರು ವಾಹನ ಕಾಯ್ದೆ ಕಲಂ 117ರಲ್ಲಿ ಹೊರಡಿಸಿರುವ ಆದೇಶದ ಉಲ್ಲಂಘನೆ ಆದಲ್ಲಿ ಅಂದರೆ ವಾಹನ ನಿಲುಗಡೆಗೆ ನಿಗದಿಪಡಿಸಿದ ಸಮಯಕ್ಕಿಂತ ಹೆಚ್ಚಿನ ಅವಧಿಗೆ ವಾಹನ ನಿಲುಗಡೆ ಆದ ಪಕ್ಷದಲ್ಲಿ ಅಂತಹ ವಾಹನಗಳನ್ನು ಕರ್ನಾಟಕ ಮೋಟಾರ್ ವೆಹಿಕಲ್ಸ್ ರೂಲ್ಸ್ ನಿಯಮ 202(2)ರ ಪ್ರಕಾರ ಸ್ಥಳೀಯ ಸಂಚಾರಿ ಪೊಲೀಸರು ವಾಹನವನ್ನು ಸ್ಥಳಾಂತರಿಸಿ ತಮ್ಮ ವಶದಲ್ಲಿಟ್ಟುಕೊಳ್ಳುವ ಅಧಿಕಾರ ಹೊಂದಿರುತ್ತಾರೆ.
3. ಮೋಟಾರು ವಾಹನ ಕಾಯ್ದೆ ಕಲಂ 117 ರಲ್ಲಿ ಹೊರಡಿಸಿರುವ ಆದೇಶದ ಉಲ್ಲಂಘನೆ ಆದಲ್ಲಿ ಸಂಬಂಧಪಟ್ಟ ವಾಹನದ ಮಾಲೀಕರ ವಿರುದ್ಧ ಕಲಂ 179ರ ಅಡಿಯಲ್ಲಿ 500=00 ರೂಪಾಯಿಗಳವರಿಗೂ ದಂಡವನ್ನು ವಿಧಿಸಲು ಅವಕಾಶವಿರುತ್ತದೆ.
4. ಮೋಟಾರು ವಾಹನ ನಿಯಮ 202 (3) ಅನ್ವಯ ಹೀಗೆ ಸ್ಥಳಾಂತರಿಸಿದ ವಾಹನಗಳ ಚಾಲಕ/ಮಾಲೀಕರು, ಸರ್ಕಾರ ನಿಗದಿಪಡಿಸಿರುವ "ವಾಹನ ಸ್ಥಳಾಂತರ ಶುಲ್ಕ"ವನ್ನು ನೀಡಿ ನಿಗದಿತ ರಸೀದಿ ಪಡೆಯಬೇಕಾಗಿರುತ್ತದೆ.

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 2.05.2005 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ: 28.04.2005 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಎಸ್. ಮರಿಸ್ವಾಮಿ**
ಪೊಲೀಸ್ ಕಮೀಷನರ್, ಬೆಂಗಳೂರು ನಗರ.

ಪಿ.ಆರ್.896

**OFFICE OF THE COMMISSIONER, BANGALORE DEVELOPMENT AUTHORITY, BANGALORE**
**NOTIFICATION UNDER SECTION 17 (1) AND (3) OF B.D.A.ACT 1976**
**No. BDA/Commr/LAO/1109/2005-2006, Bangalore dated: 17th June 2005**

Where as it appears to the Bangalore Development Authority, that the lands specified in the schedule here to likely to be needed for the purpose ie., for the "formation of RING ROAD BETWEEN MAGADI ROAD AND MYSORE ROAD" In this regard a development scheme has been proposed.

Notice to that effect is here by given to all whom it may concern in accordance with the provisions of sub-section (1) and (3) of section 17 of the B.D.A. Act 1976. (Karnataka Act no 12 of 1976). In accordance with section 36 of B.D.A. Act, the Land Acquisition officer, Bangalore Development Authority, Bangalore, his staff and workmen are hereby authorized to exercise the powers conferred under section 4 (2) of L.A.Act 1894. Any person/s interested in this land may prefer his/her objections within 30 days form the date of Publication of this notification to the Land Acquisition officer, Bangalore Development Authority, T. Chowdaiah Road, Bangalore-560 020.

All persons interested in the said land are here by warned not to obstruct or interfere with any surveyor or any other persons employed upon the said lands for the purpose of the said Acquisition. Any contracts for the disposal of the said lands by sale, lease, mortgage, assignment, exchange, or otherwise or any other outlay or improvements made therein without the sanction of the Deputy Commissioner (Land Acquisition), Bangalore Development Authority, Bangalore, after the date of publication of this notification will under section 24 (clause seventy) of the Land Acquisition Act 1894, be disregarded by the officer, assessing Compensation for such part of the said lands as may be finally acquired.

The particulars of the scheme, the map of the area, Comprised therein and the statement specifying the lands which it is proposed to be acquired may be seen in the office of the Land Acquisition Officer, Bangalore Development Authority, Bangalore, during the office hours on all working days.

The details of lands proposed for acquisition, extent, and schedule are as follows.

**District**: Bangalore **Taluk:** Bangalore North **Hobli:** Yashwanthapura **Village:**-1. Sajjepalya
2. Sree Gandhadakaval

| Sl.No | Name of the Khathedar/ Anubhavadar | Syno | Whether dry/ wet/ garden | Total extent | Kharab Extent | Remaining extent | Asses ment | Extent proposed for acqui sition | Boundaries | | | |
|---|---|---|---|---|---|---|---|---|---|---|---|---|
| | | | | | | | | | East | West | North | South |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
| | **Sajjepalya Village** | | | | | | | | | | | |
| 1. | Govt, Beggar coloney Sumanahally Leprocy care centre | 3 | dry | 11-02 | 0-17 | 10-25 | 12.33 | 0-30 | syno. 3 RL | syno. 3 RL | Srigandha dakaval Gadi | Syno 4 |
| | **Srigandhadakaval village** | | | | | | | | | | | |
| 2. | Smt. Lingamma, Muniyappa, Sarojamma, Nagamma, Siddagangamma, Muniramaiah | 57/6 (57/6A, 57/6B) | dry/ Garden | 4-29 | 0-30 | 3-39 | 3.70 | 0-31 | 57/7 | 57/6A, 6B.RL | Road | Sajjepalya Gadi |
| 3. | G.M. Seenal bin Modiram Govt | 57/7 | dry | 0-33 | - | 0-33 | 0.14 | 0-10 | RL57/7 | 57/6B | Road | Sajjepalya Gadi |
| | Total | | | | | | | 1-31 | | | | |

Commissioner Bangalore Development Authority.

**OFFICE OF THE COMMISSIONER, BANGALORE DEVELOPMENT AUTHORITY, BANGALORE**

**ERRATUM/ADDENDUM No. BDA/Commr/LAO/1109/2005-2006, dated: 17th June 2005**

Where as the notification under section 17 (1) & (3) of Bangalore Development Authority Act 1976, has been issued by the Bangalore Development Authority vide Notification No. BDA/Commr/LAO/4023/04-05 Bangalore dated: 24th March 2005, published in the Karnataka Gazette on 21.04.2005, for Acquisition of certain Lands in several sy.nos of Nayandahalli and Malagala Villages for the formation of Ring Road between Magadi Road to Mysore Road. An omission has been noticed which has necessitated the issue of this ERRATUM/ADDENDUM to the said notification. The following additions shall be noted by all the concerned.

| Sl. No in the Notification | Addition to column no 2 in the Notification | Column numbers added to the notification. | | | |
|---|---|---|---|---|---|
| | | East | West | North | South |
| | **NAYANDAHALLI** | 10 | 11 | 12 | 13 |
| 1 | - | RL53 | 55/1 | Gangondanahalli | 55/2 |
| 2 | - | 52 | 55 | 52 | RL 54 |
| 3 | - | 53 | RL 55/1 | Gangondanahalli | RL 55/1 |
| 4 | Sri Krishnappa bin Peru Pillappa, Ramakrishnappa Ammayyamma kom Venkatappa | 52,54 | RL 55/2 | 53 | RL 55/2 |
| | **MALAGALA** | | | | |
| 1 | - | RL25/1 | RL25/1 | 25/2 | 23 |
| 2 | - | RL25/2 | RL25/2 | 22 | 25/1 |

PD-51

Commissioner Bangalore Development Authority Bangalore.

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡುವಳಿಗಳು**

**ವಿಷಯ :** ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಕಾಡಜಕ್ಕಸಂದ್ರ ಗ್ರಾಮದಲ್ಲಿ ಗ್ರೇ ಗ್ರಾನೈಟ್‌ಗಾಗಿ ಮೆ: ರೇಷ್ಮೆ ಎಕ್ಸ್‌ಪೋರ್ಟ್ಸ್ ರವರ ಗುತ್ತಿಗೆಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ :**
1. ಕೇಂದ್ರ ಕಛೇರಿ ಪತ್ರ ಸಂಖ್ಯೆ: ಗಭೂಇ:ಡಿಸಿಬಿ:ಕಗಗು:515:05-06:421 ದಿನಾಂಕ: 15.04.2005.
2. ಉಪ ನಿರ್ದೇಶಕರು, ಕನಕಪುರ ರವರ ಪತ್ರ ಸಂಖ್ಯೆ: ಗಭೂಇ:ಉನಿಕ: ಡಿಸಿಬಿ:ಕಗಗು:515:2005-06:2318 ದಿನಾಂಕ: 3.6.2005.
3. 2004-05ನೇ ಸಾಲಿನ ಲೆಕ್ಕ ಪರಿಶೀಲನಾ ವರದಿ.

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಕಾಡಜಕ್ಕಸಂದ್ರ ಗ್ರಾಮದ ಸರ್ವೆ ನಂ.69ರಲ್ಲಿ ಮೆ: ರೇಷ್ಮೆ ಎಕ್ಸ್‌ಪೋರ್ಟ್ಸ್ ರವರಿಗೆ 10.00 ಎಕರೆಗೆ ದಿನಾಂಕ: 22.5.2002 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಉಲ್ಲೇಖಿತ ಪತ್ರಗಳಡಿಯಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರನೀಡಿ, 2005ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ.3,88,958/- ಗಳನ್ನು ಪಾವತಿಸುವಂತೆ ತಿಳಿಸಲಾಗಿತ್ತು.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ಪತ್ರ 1ರ ಅಂತಿಮ ನೋಟೀಸಿಗೆ ಯಾವ ರೀತಿಯೂ ಸ್ಪಂದಿಸಿರುವುದಿಲ್ಲವಾದ ಕಾರಣ ಹಾಗೂ ಉಲ್ಲೇಖಿತ ಪತ್ರದ 2ರಲ್ಲಿ ತಿಳಿಸಿದಂತೆ ಗುತ್ತಿಗೆಯನ್ನು ನಿಷ್ಕ್ರಿಯವಾಗಿಟ್ಟಿರುವುದರಿಂದ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39ರಂತೆ ಸರ್ಕಾರದ ಅಧಿಸೂಚನೆ III ಸಂಖ್ಯೆ: ಸಿಐ 418 ಎಂಅರ್‌ಸಿ 92 ದಿನಾಂಕ: 2.7.94ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದಂತೆ ಗುತ್ತಿಗೆಯನ್ನು ರದ್ದುಪಡಿಸಬೇಕಾಗಿದೆ.

**ಆದೇಶ ಸಂಖ್ಯೆ: ಗಭೂಇ:ಡಿಸಿಬಿ: ಕಗಗು:515:2005-06/3785 ದಿನಾಂಕ: 21ನೇ ಜೂನ್ 2005**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39 ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕಿನ ಕಾಡಜಕ್ಕಸಂದ್ರ ಗ್ರಾಮದ ಸರ್ವೆ ನಂ. 69 ರಲ್ಲಿ 10.00 ಎಕರೆಗೆ ಗ್ರೇ ಗ್ರಾನೈಟ್‌ಗಾಗಿ ನೀಡಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 515ನ್ನು ತಕ್ಷಣದಿಂದ ರದ್ದುಪಡಿಸಲಾಗಿದೆ. ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಜಾಮೀನು ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಮಾಡಿಕೊಳ್ಳಲಾಗಿದೆ.

ನಿರ್ದೇಶಕರು,
ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು.

ಪಿ.ಆರ್.894